# ನಮ್ಮ ಮಾನಸ

ಜುಲೈ 2007
ಸಂಪುಟ : 1 ಸಂಚಿಕೆ : 3

ಸಂಪಾದಕರು ಹಾಗೂ ಪ್ರಕಾಶಕರು
**ರಾಜೇಶ್ವರಿ ಹೆಚ್.ಎಸ್.**
114/5, 9ನೇ ತಿರುವು
3ನೇ ಮುಖ್ಯರಸ್ತೆ, ಚಾಮರಾಜಪೇಟೆ
ಬೆಂಗಳೂರು – 560 018

ಮುದ್ರಕರು
**ಇಳಾ ಮುದ್ರಣ**
# 36, 40 ಅಡಿ ರಸ್ತೆ, ರಾಘವನಗರ
ನ್ಯೂ ಟಿಂಬರ್‌ಯಾರ್ಡ್ ಲೇಔಟ್
ಬೆಂಗಳೂರು – 26
✆ : 26757159 / 32715773



ಚಂದಾ ವಿವರ

| | |
|---|---|
| ಬಿಡಿಪ್ರತಿ | 8–00 ರೂ. |
| ವಾರ್ಷಿಕ ಚಂದಾ (ವಿಶೇಷ ಸಂಚಿಕೆಯೊಂದಿಗೆ) | 100–00 ರೂ. |
| ಸಂಸ್ಥೆಗಳಿಗೆ | 150–00 ರೂ. |

## ಪರಿವಿಡಿ





## ನಮ್ಮ ಮಾನಸ

114/5, 9ನೇ ತಿರುವು, 2ನೇ ಮುಖ್ಯರಸ್ತೆ, ಚಾಮರಾಜಪೇಟೆ,
ಬೆಂಗಳೂರು – 560 018

ಚಂದಾಹಣವನ್ನು ಈ ವಿಳಾಸಕ್ಕೆ ಚೆಕ್ ಅಥವಾ
ಡಿ.ಡಿ. ಮೂಲಕ ಕಳಿಸಬಹುದು



ಸಂಪಾದಕೀಯ

# ಎಲ್ಲವೂ ಕಾಟಾಚಾರವಾಗದಿರಲಿ

ನಮ್ಮ ಸಮಾಜದ ಸಾಮಾಜಿಕ, ಆರ್ಥಿಕ, ರಾಜಕೀಯ ಹಾಗೂ ಧಾರ್ಮಿಕ ಹಿತಾಸಕ್ತಿಗಳನ್ನೆಲ್ಲಾ ಕಾಪಾಡುವುದು ಕುಟುಂಬ. ಈ ಕುಟುಂಬದ ನಾಲ್ಕು ಗೋಡೆಯ ಒಳಗಡೆ ಮಹಿಳೆಯರು ಅಮಾನುಷವಾದ ಹಿಂಸೆಗೆ, ಕ್ರೌರ್ಯಕ್ಕೆ ಬಲಿಪಶುಗಳಾಗುತ್ತಿದ್ದಾರೆ. ಈ ಹಿಂಸೆ ನಮ್ಮ ಸಮಾಜದ ಎಲ್ಲ ವರ್ಗ ಹಾಗೂ ಜಾತಿಯ ಮಹಿಳೆಯರ ಮೇಲೆ ಅವ್ಯಾಹತವಾಗಿ ನಡೆಯುತ್ತಲೇ ಬಂದಿದೆ. ಕುಟುಂಬದ ಗೌರವ, ಮರ್ಯಾದೆ, ಘನತೆಯನ್ನು ಕಾಪಾಡುವ, ರಕ್ಷಿಸುವ ನೆಪದಲ್ಲಿ ಈ ಹಿಂಸೆ ಕುಟುಂಬವೆನ್ನುವ ಭದ್ರ ಕೋಟೆಯಲ್ಲಿ ಅಡಗಿ ಹೋಗುತ್ತಿದೆ.

ಅಮಾನುಷವಾದ ಈ ಕೌಟುಂಬಿಕ ಹಿಂಸೆಯನ್ನು ಕುಟುಂಬದ ಚೌಕಟ್ಟಿನಿಂದ ಹೊರತಂದು ಸಮಸ್ಯೆಗೆ ಸಾಮಾಜಿಕ, ರಾಜಕೀಯ ಸ್ವರೂಪವನ್ನು ನೀಡುವಲ್ಲಿ ಮಹಿಳಾ ಚಳವಳಿ ಮಹತ್ತರವಾದ ಪಾತ್ರವನ್ನು ವಹಿಸಿದೆ. 1975ರಿಂದಲೂ ಮಹಿಳಾ ಚಳವಳಿ ಮಹಿಳೆಯರ ವೈಯಕ್ತಿಕ ಬದುಕನ್ನು ರಾಜಕೀಯ ನೆಲೆಯಲ್ಲಿ ಅರ್ಥೈಸಲು ಪ್ರಯತ್ನಪಟ್ಟಿದೆ. ಈ ಪ್ರಯತ್ನದ ಫಲವಾಗಿಯೇ ಸೆಪ್ಟೆಂಬರ್ 2005ರಲ್ಲಿ ಕೌಟುಂಬಿಕ ದೌರ್ಜನ್ಯ ವಿರೋಧಿ ಕಾನೂನು ಬಂದಿತು.

ಈ ಕಾನೂನನ್ನು ಜಾರಿಗೆ ತರುವಲ್ಲಿ ಕರ್ನಾಟಕ ಸರ್ಕಾರ ವಿಳಂಬನೀತಿಯನ್ನು ಅನುಸರಿಸುತ್ತಿದೆ. ಇದು ಮಹಿಳೆಯರ ಬಗೆಗಿನ ನಿರ್ಲಕ್ಷ್ಯ ಧೋರಣೆಯಾಗಿದೆ. ಈ ಕಾಯಿದೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಮಹಿಳಾ ಸಂಘಟನೆಗಳು ಹಲವಾರು ಬಾರಿ ಸಭೆಸೇರಿ, ದೀರ್ಘವಾಗಿ ಚರ್ಚಿಸಿ ತಮ್ಮ ಸಲಹೆ, ಸೂಚನೆಗಳನ್ನು ನೀಡಿವೆ. ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿವೆ. ಆದರೆ ಈ ಕಾಯಿದೆಯನ್ನು ಜಾರಿಗೆ ತರಬೇಕಾದವರಿಗೆ ಸರಿಯಾದ ಮಾಹಿತಿ, ಸ್ಪಷ್ಟತೆ ಇಲ್ಲದಿರುವುದು ಕಂಡುಬರುತ್ತಿದೆ. ಪೊಲೀಸ್ ಇಲಾಖೆಗಾಗಲಿ, ಸಂಬಂಧಪಟ್ಟ ನ್ಯಾಯಾಂಗದ ಅಧಿಕಾರಿಗಳಿಗಾಗಲಿ ಈ ಕಾಯಿದೆಯ ಪ್ರಾಮುಖ್ಯತೆ, ಕಾಯಿದೆಯನ್ನು ಜಾರಿಗೊಳಿಸುವ ವಿವಿಧ ಹಂತಗಳ ಬಗ್ಗೆ ತಿಳಿವಳಿಕೆ ಇಲ್ಲ. ಅವಸರದಲ್ಲಿ ನಿರ್ಧಾರ ತೆಗೆದುಕೊಂಡು ತಾಲ್ಲೂಕಿಗೆ ಒಬ್ಬರಂತೆ 176 ರಕ್ಷಣಾ ಅಧಿಕಾರಿಗಳನ್ನು ಮಾತ್ರ ನೇಮಕ ಮಾಡಲಾಗಿದೆ.

ರಾಷ್ಟ್ರೀಯ ಮಹಿಳಾ ಆಯೋಗ 2005ರಲ್ಲಿ ಮಹಿಳೆಯರ ಮೇಲೆ ನಡೆಯುತ್ತಿರುವ ಅತ್ಯಾಚಾರ, ಅಪಹರಣ, ವರದಕ್ಷಿಣೆ ಸಾವು, ಕಿರುಕುಳ, ಲೈಂಗಿಕ ಹಿಂಸೆ ಮುಂತಾದವುಗಳಿಗೆ ಸಂಬಂಧಪಟ್ಟ ಅಂಕಿಅಂಶವನ್ನು ಬಿಡುಗಡೆ ಮಾಡಿದೆ. ಕರ್ನಾಟಕದಲ್ಲಿ ಇಂತಹ ಹಿಂಸೆಗೆ 4,384 ಮಹಿಳೆಯರು ಒಳಗಾಗಿದ್ದಾರೆ. ಇಷ್ಟು ಅಗಾಧ ಪ್ರಮಾಣದಲ್ಲಿ ಮಹಿಳೆಯರ ಮೇಲೆ ಹಿಂಸೆ ನಡೆಯುತ್ತಿರುವ ಹಿನ್ನೆಲೆಯಲ್ಲಿ ಇದಕ್ಕಾಗಿ ಪ್ರತ್ಯೇಕ ವಿಭಾಗವನ್ನು ರಚಿಸುವುದು, ಅಗತ್ಯವಾದ ಹಣಕಾಸನ್ನು ಒದಗಿಸುವುದು, ಅಧಿಕಾರಿಗಳ ನೇಮಕ, ಹೀಗೆ ಹಲವಾರು ಬೇಡಿಕೆಗಳನ್ನು ಮಹಿಳಾ ಸಂಘಟನೆಗಳು ಇಟ್ಟಿದ್ದರೂ ಸರ್ಕಾರ ಇವುಗಳನ್ನು ಪರಿಗಣಿಸಿಲ್ಲ. ಈಗಾಗಲೇ ಹೆಚ್ಚು ಕೆಲಸದ ಹೊರೆ ಇರುವ ಸಿ.ಡಿ.ಪಿ.ಓ.ಗಳಿಗೆ ಈ ಜವಾಬ್ದಾರಿಯನ್ನು ವಹಿಸಲಾಗಿದೆ. ಮಹಿಳೆಯರಿಗೆ ನೆರವು ನೀಡಲು ಕೇವಲ 2.65 ಕೋಟಿ ರೂಪಾಯಿಗಳನ್ನು ಬಜೆಟ್‌ನಲ್ಲಿ ಮೀಸಲಿಡಲಾಗಿದೆ. ನೆರವು ನೀಡುವ ಸ್ವಯಂಸೇವಾ ಸಂಸ್ಥೆಗಳನ್ನು ಸಹ ಗುರುತಿಸಿಲ್ಲ.

ಮಹಿಳೆಯರ ಹಿತಾಸಕ್ತಿಯನ್ನು ಕಾಪಾಡುವುದು, ಅವರಿಗೆ ರಕ್ಷಣೆ ನೀಡುವುದು ಸರ್ಕಾರದ ಆದ್ಯ ಕರ್ತವ್ಯ. ಉತ್ತಮವಾದ ಕಾನೂನು ಇದ್ದರೂ ಅವುಗಳ ಅನುಷ್ಠಾನದ ಕೊರತೆ ಇದೆ. ಅಧಿಕಾರಿಶಾಹಿಯಿಂದಾಗಿಯೇ ನ್ಯಾಯ ದೊರಕದಿರುವ ನಿದರ್ಶನಗಳು ಹೆಚ್ಚು. ಸರ್ಕಾರ ಈ ಕಾನೂನನ್ನು ಪರಿಣಾಮಕಾರಿಯಾಗಿ ಅನುಷ್ಠಾನಕ್ಕೆ ತರುವ ಕ್ರಮದ ಬಗ್ಗೆ ಹೆಚ್ಚು ಗಮನ ನೀಡಬೇಕಾಗಿದೆ. ನ್ಯಾಯ ಪಡೆಯುವ ಹಕ್ಕು ಪ್ರತಿಯೊಬ್ಬ ಮಹಿಳೆಗೂ ಇದೆ.

* * *

'ನಮ್ಮ ಮಾನಸ'ದ ಮೂರನೆಯ ಸಂಚಿಕೆ ನಿಮ್ಮ ಕೈಯಲ್ಲಿಡುತ್ತಿದ್ದೇವೆ. ಈ ಸಂಚಿಕೆಗಾಗಿ ವಿಶೇಷ ಲೇಖನಗಳನ್ನು ಕೊಟ್ಟವರಿಗೆ, ಜಾಹಿರಾತು ನೀಡಿ ಉಪಕರಿಸಿದ ಕೆ.ಪಿ.ಸಿ.ಎಲ್. ಹಾಗೂ 'ನಾಕುತಂತಿ ಬಳಗ'ಕ್ಕೆ, ಕಚೇರಿಯ ತಿಂಗಳ ಬಾಡಿಗೆ ಕೊಟ್ಟ ಮಿತ್ರರಿಗೆ, ಹೊಸ ಚಂದಾದಾರರನ್ನು ಮಾಡಿದವರಿಗೆ, ಚಂದಾದಾರರಿಗೆ ಮತ್ತು ಕೆಲವು ರೇಖಾಚಿತ್ರಗಳನ್ನು ರಚಿಸಿಕೊಟ್ಟ ಬಿ. ಸುರೇಶರಿಗೆ ನಮ್ಮ ಕೃತಜ್ಞತೆಗಳು.

*ಸಂಪಾದಕ ಮಂಡಳಿ*

# ಕೇರಳದ ಮೀನುಗಾರ ಹೆಂಗಸರ ಹೋರಾಟ

***ಕೇರಳದ 'ತೀರದೇಸ ಮಹಿಳಾ ವೇದಿ'- ಇದು ಸ್ವತಂತ್ರ ಮತ್ಸ್ಯ ತೊಜಿಲಾಲಿ ಫೆಡರೇಶನ್ ಸಂಸ್ಥೆಯ ಮಹಿಳಾ ವೇದಿಕೆ. ಓಂ ಜಿ. ಜಾನ್‌ರವರು ಸಿದ್ಧಪಡಿಸಿ, ತೀರದೇಸ ಮಹಿಳಾ ವೇದಿಯವರು ಪ್ರಕಟಿಸಿದ 'Fisher Women in Kerala Fight Back' ಪುಸ್ತಕವನ್ನು ಆಧರಿಸಿ ಕನ್ನಡದ ಈ ಲೇಖನವನ್ನು 'ನಮ್ಮ ಮಾನಸ'ಕ್ಕಾಗಿ ಸಿದ್ಧಪಡಿಸಲಾಗಿದೆ. ವಿಭಿನ್ನ ಸ್ತರದ, ನೆಲೆಯ ಮಹಿಳೆಯರು ನಡೆಸುವ ಹೋರಾಟ ಮಹಿಳಾ ಚಳವಳಿಯ ಭಾಗವಾಗಿರುತ್ತದೆ. ಹೋರಾಟಗಳನ್ನಾಧರಿಸಿದ ಲೇಖನಗಳನ್ನು 'ಮಾನಸ'ಕ್ಕಾಗಿ ನೀವೂ ಬರೆಯಿರಿ.***



**ಜಾ**ಗತೀಕರಣದ ಸಂದರ್ಭದಲ್ಲಿ ಮೀನುಗಾರ ಹೆಂಗಸರು ಎದುರಿಸಬೇಕಾದ ಸವಾಲು, ಸಮಸ್ಯೆಗಳು, ಹೋರಾಟವನ್ನು ಈ ಪುಸ್ತಕ ಬಿಚ್ಚಿಡುತ್ತದೆ. ಇದೊಂದು ಚಾರಿತ್ರಿಕ ದಾಖಲೆ. ನಮ್ಮ ದೇಶದಲ್ಲಿ 5.4 ಮಿಲಿಯನ್ ಜನರು ಮೀನುಗಾರಿಕೆಯಲ್ಲಿ ತೊಡಗಿದ್ದಾರೆಂಬ ದಾಖಲೆ ಇದೆ. ಇದರಲ್ಲಿ 3.8 ಮಿಲಿಯನ್ ಮೀನುಗಾರರು ಗಂಡಸರಾದರೆ, 1.6 ಮಿಲಿಯನ್ ಹೆಂಗಸರು ಮೀನುಗಾರಿಕೆಯ ವೃತ್ತಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ಕೇರಳ 590 ಚದರ ಕಿಲೋಮೀಟರ್‌ನಷ್ಟು ಸಮುದ್ರತೀರ ವನ್ನು ಹೊಂದಿದೆ. ಇಲ್ಲಿ 222 ಹಳ್ಳಿಗಳಲ್ಲಿ ಮೀನುಗಾರರು ಬದುಕುತ್ತಾರೆ. ಈ ದೇಶದ ಎಲ್ಲಾ ಕಡೆ ಮಹಿಳಾ ಮೀನುಗಾರರು ಮೀನು ಸಂಸ್ಕರಣ ಹಾಗೂ ಮಾರಾಟ ವೃತ್ತಿಯಲ್ಲಿ ತಮ್ಮನ್ನು ಹೆಚ್ಚಾಗಿ ತೊಡಗಿಸಿಕೊಂಡಿರುವುದು ಕಂಡುಬರುತ್ತಿದೆ. ಹೆಂಗಸರ ಈ ವೃತ್ತಿ ಅವರ ಕುಟುಂಬಕ್ಕೆ ಮೊದಲು ಹೆಚ್ಚುವರಿ ಆದಾಯ ವಾಗಿರುತ್ತಿತ್ತು. ಜಾಗತೀಕರಣದ ಹಿನ್ನೆಲೆಯಲ್ಲಿ ಈಗ ಮಹಿಳೆಯರ ಮೀನು ಮಾರಾಟದ ವೃತ್ತಿಯೇ ಮುಖ್ಯ ಆದಾಯಕ್ಕೆ ಆಧಾರವಾಗಿರುವುದು ಕಂಡುಬರುತ್ತದೆ.

ಮಹಿಳಾ ಮೀನುಗಾರರು ಪುರುಷರಷ್ಟೇ ಸಾಮರ್ಥ್ಯ ಉಳ್ಳವರಾಗಿದ್ದರೂ ಅವರ ಆದಾಯದಲ್ಲಿ ಅಸಮಾನತೆ ಇರುತ್ತದೆ. ಮಹಿಳೆಯರು ಕಡಿಮೆ ಗಳಿಕೆಯನ್ನೇ ಹೊಂದಿರು ತ್ತಾರೆ. ಮಾರಾಟ ವೃತ್ತಿಯಲ್ಲಿ ಹೆಂಗಸರು ತೊಡಗಿದ್ದರೂ ಅವರ ಸಾಮಾಜಿಕ ಮಟ್ಟ ಕಡಿಮೆ ದರ್ಜೆಯದೇ ಆಗಿರುತ್ತದೆ. ಮೀನುಗಾರಿಕೆ ಚಟುವಟಿಕೆಗಳು ಯಾಂತ್ರೀಕರಣಗೊಂಡಾಗ ಅಥವಾ ಹೆಚ್ಚಾದಾಗ ಅದರ ಲಾಭವನ್ನು ಪುರುಷ ಮೀನುಗಾರರು ಪಡೆದುಕೊಳ್ಳುತ್ತಾರೆ.

ಜಾಗತೀಕರಣ ಹಾಗೂ ಆಧುನಿಕತೆಯಿಂದಾಗಿ ಜೀವನಾಧಾರವಾಗಿದ್ದ ಮೀನುಗಾರಿಕೆ ಇಂದು ಕೈಗಾರಿಕಾ ಸಾಹಸವಾಗಿ ರೂಪುಗೊಳ್ಳತೊಡಗಿದೆ. ಮೀನುಗಾರಿಕೆಯಲ್ಲಿ ಸಾಂಪ್ರದಾಯಿಕವಾಗಿ ತೊಡಗಿಕೊಂಡಿದ್ದ ಮೀನುಗಾರರು ಇಂದು ಕೈಗಾರಿಕೋದ್ಯಮಿಗಳ ಅಡಿಯಾಳುಗಳಾಗಬೇಕಾಗಿದೆ. ಈ ಕೈಗಾರಿಕೋದ್ಯಮಿಗಳು ಯಾರೂ ಸಾಂಪ್ರದಾಯಿಕವಾಗಿ ಮೀನುಗಾರಿಕೆಯಲ್ಲಿ ತಮ್ಮನ್ನು ತೊಡಗಿಸಿಕೊಂಡವರಲ್ಲ. ಜೊತೆಗೆ ಪ್ರವಾಸೋದ್ಯಮ, ಶಿಪ್‌ಬಿಲ್ಡಿಂಗ್ ಯಾರ್ಡ್‌ನಂತಹ ದೊಡ್ಡ ದೊಡ್ಡ ಕಟ್ಟಡಗಳಿಗಾಗಿ ಕೆರೆಮುಚ್ಚುವ ಕಾರ್ಯಕ್ರಮಗಳ ಹಿನ್ನೆಲೆಯಲ್ಲಿ ಮೀನುಗಾರರು ಸ್ಥಳಾಂತರಗೊಳ್ಳುತ್ತಿದ್ದಾರೆ ಮತ್ತು ಮೂಲೆಗುಂಪಾಗುತ್ತಿದ್ದಾರೆ. ಮಾಲ್‌ಮಾರ್ಟ್‌ನಂತಹ ಬಹು ರಾಷ್ಟ್ರೀಯ ಕಂಪನಿಯಿಂದಾಗಿ, ಸ್ಥಳೀಯ ವರ್ತಕರಿಂದಾಗಿ ಈ ಉದ್ಯಮದಲ್ಲಿ ಸಾಂಪ್ರದಾಯಿಕವಾಗಿ ತೊಡಗಿಸಿಕೊಂಡಿದ್ದ ಗಂಡಸರು ಉದ್ಯಮದ ಮೇಲೆ ತಮ್ಮ ಹಿಡಿತ ಕಳೆದು ಕೊಳ್ಳುತ್ತಿದ್ದರೆ, ಹೆಂಗಸರು ಕುಟುಂಬದ ಉಳಿವಿಗಾಗಿ ಆದಾಯ ತರುವಂತಹ ಇನ್ನಾವುದೋ ಕೆಲಸಗಳಲ್ಲಿ ತೊಡಗಿಸಿಕೊಳ್ಳುವುದು ಅನಿವಾರ್ಯವಾಗುತ್ತಿದೆ. ಸಾಂಪ್ರದಾಯಿಕವಾಗಿ ತಮ್ಮ ಮೀನುಗಾರ ಸಮುದಾಯದವರು ಹಿಡಿದ ಮೀನುಗಳನ್ನು ಹೆಂಗಸರು ತೆಗೆದುಕೊಂಡು ಮಾರಾಟ ಮಾಡುತ್ತಿದ್ದರು. ಆದರೆ ಈಗ ಮೀನುಗಾರ ಮಹಿಳೆಯರು ಮೀನುಗಳನ್ನು ದೊಡ್ಡ ಗುತ್ತಿಗೆದಾರರಿಂದ ಅಥವಾ ವರ್ತಕರಿಂದ ತೆಗೆದುಕೊಂಡು ಹೋಗಿ ವ್ಯಾಪಾರ ಕೇಂದ್ರದಲ್ಲಿ ಮಾರಬೇಕಾದ ಸನ್ನಿವೇಶದಲ್ಲಿ ಬದುಕುತ್ತಿದ್ದಾರೆ. ವ್ಯಾಪಾರ ಕೇಂದ್ರದ ಎಲ್ಲಾ ರೀತಿಯ ಒತ್ತಡ, ಸವಾಲುಗಳನ್ನೂ ಎದುರಿಸಿ, ತಮ್ಮ ಹಕ್ಕನ್ನು ಸ್ಥಾಪಿಸಿಕೊಳ್ಳಬೇಕಾದ ಒಂದು ಹೊಸ ಸನ್ನಿವೇಶ ಸೃಷ್ಟಿಯಾಗಿದೆ. ಪೇಟೆ, ಅಥವಾ ವ್ಯಾಪಾರ ಕೇಂದ್ರ ಹೇಗಿರುತ್ತದೆ ಎಂದರೆ ಅಲ್ಲಿ ಹಣ ಅಥವಾ ಬಲ ಪ್ರದರ್ಶನ ಮಾಡಿದರೆ ಮಾತ್ರ ಉಳಿದು ಕೊಳ್ಳಬೇಕಾಗುತ್ತದೆ. ಇವೆರಡೂ ಇಲ್ಲದ ಮೀನುಗಾರ ಮಹಿಳೆಯರು ತಮ್ಮ ಒಗ್ಗಟ್ಟಿನಿಂದ ಹಾಗೂ ಹೋರಾಟದಿಂದಾಗಿ ಮಾತ್ರ ಮಾರಾಟ ಕೇಂದ್ರಗಳಲ್ಲಿ ಬದುಕುಳಿದ್ದಾರೆ.

*1989ರಲ್ಲಿ ಫಲಾಯಮ್ ಮಾರಾಟ ಕೇಂದ್ರದಲ್ಲಿ ಶಾರ್ಲೆಟ್ ಎಂಬ ಬಸಿರಿ ಹೆಂಗಸು ಮೀನುಗಳನ್ನು ಬಿಟ್ಟಿಯಾಗಿ ಕೊಡಲು ಒಪ್ಪದಿದ್ದಾಗ ಆ ಕೇಂದ್ರದ ಕೂಲಿಕಾರನೊಬ್ಬ ಆಕೆಯ ಮೇಲೆ ಆಕ್ರಮಣ ನಡೆಸಿದ್ದ. ಆಕೆ ಕೆಳಗೆ ಬಿದ್ದಳು. ಆಗಲೂ ಬಿಡದೇ ಆಕೆಯನ್ನು ಹೊಡೆದು ಕ್ರೂರವಾಗಿ ಹಿಂಸಿಸಿದ್ದನು. ಆಕೆಗೆ ಗರ್ಭಪಾತವಾಗಿದ್ದಲ್ಲದೇ, ದೀರ್ಘ ಕಾಲದವರೆಗೆ ಆಕೆ ಆಸ್ಪತ್ರೆಯಲ್ಲಿಯೇ ಇರಬೇಕಾಗಿತ್ತು. ಮೀನುಗಾರ ಮಹಿಳೆಯರೊಂದಿಗೆ ಮಹಿಳಾ ವೇದಿ ನಡೆಸಿದ ಹೋರಾಟದ ಫಲವಾಗಿ ಅಪರಾಧಿಗೆ ನಾಲ್ಕು ವರ್ಷಗಳ ಕಾಲ ಕಠಿಣ ಸಜೆಯಾಯಿತು.*

'ತೀರದೇಸ ಮಹಿಳಾ ವೇದಿ' 1980ರಲ್ಲಿ ಅಸ್ತಿತ್ವಕ್ಕೆ ಬಂದಿತು. ಪ್ರಾರಂಭದಲ್ಲಿ ತಿರುವನಂತಪುರಂನಲ್ಲಿ ಮಾತ್ರ ಕಾರ್ಯಪ್ರವೃತ್ತವಾಗಿದ್ದ ಈ ಸಂಘಟನೆ ಈಗ ಕೇರಳದ ಬಹುಭಾಗಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದೆ. 'ತೀರದೇಸ ಮಹಿಳಾ ವೇದಿ' ಸಂಘಟನೆಯು ನೇರವಾಗಿ ಕ್ರಿಯಾತ್ಮಕ ಚಟುವಟಿಕೆಗಳಲ್ಲಿ, ಹೋರಾಟಗಳಲ್ಲಿ ತೊಡಗಿಸಿಕೊಂಡಿದೆ. ಇತರ ಸಂಘಟನೆಗಳೊಡನೆ, ಮಹಿಳಾ ವೇದಿಕೆಗಳೊಡನೆ, ಕೇರಳದ ಸ್ವತಂತ್ರ ಮತ್ಸ್ಯ ತೊಜಿಯಾಲಿ ಫೆಡರೇಶನ್ ಜೊತೆಗೆ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ಪ್ರಯಾಣ ಸೌಲಭ್ಯ, ವ್ಯಾಪಾರ ಕೇಂದ್ರದ ಸೌಲಭ್ಯ, ಲೈಂಗಿಕ ದೌರ್ಜನ್ಯ, ಕುಟುಂಬದ ಸಮಸ್ಯೆಗಳು - ಹೀಗೆ ಮೀನುಗಾರ ಮಹಿಳೆಯರಿಗೆ ಸಂಬಂಧಿಸಿದ ಹತ್ತಾರು ಸಮಸ್ಯೆಗಳಿಗೆ ಸ್ಪಂದಿಸಿ 'ತೀರದೇಸ ಮಹಿಳಾ ವೇದಿ' ಹೋರಾಟ ನಡೆಸಿದೆ.

**ವಿಶೇಷ ಬಸ್ಸುಗಳಿಗಾಗಿ**

ಮೀನುಗಾರ ಮಹಿಳೆಯರು ಸಾರ್ವಜನಿಕ ಬಸ್ಸುಗಳಲ್ಲಿ ಓಡಾಡುವಂತಿಲ್ಲ. ದೊಡ್ಡದೊಡ್ಡ ಗುತ್ತಿಗೆದಾರರಿಂದ ಮೀನುಗಳನ್ನು ಕೊಳ್ಳುವುದಕ್ಕಾಗಿ ಈ ಮಹಿಳೆಯರು ಮಧ್ಯರಾತ್ರಿ ಮೂರು ಗಂಟೆಗೇ ಎದ್ದು ವ್ಯಾಪಾರ ಕೇಂದ್ರಕ್ಕೆ ಓಡಬೇಕಾಗುತ್ತದೆ. ಈ ರೀತಿಯ ಬದುಕಿನ ಬವಣೆಯಿಂದಾಗಿ ಅವರು ನಿದ್ರೆಗೆಡುವುದಲ್ಲದೇ, ಗಂಭೀರವಾದ ಆರೋಗ್ಯದ ಸಮಸ್ಯೆಗಳನ್ನೂ ಎದುರಿಸಬೇಕಾಗುತ್ತದೆ. ಸಾರ್ವಜನಿಕ ಬಸ್ಸುಗಳಿಂದ ಮೀನುಗಾರ ಹೆಂಗಸರನ್ನು ಹೊರತಳ್ಳಿದ ಘಟನೆಗಳು ನಡೆದದ್ದರಿಂದ, ಬೆಳಗ್ಗೆ ನಡೆದುಹೋಗುವ ಹೆಂಗಸರು ಸಂಜೆಯೇ ಮನೆ ಸೇರುವಂತಾಗುತ್ತಿತ್ತು. ಈ ಬವಣೆಯನ್ನು ತಪ್ಪಿಸಲೋಸುಗ 'ತೀರದೇಸ ಮಹಿಳಾ ವೇದಿ' - ಇತರ ಸಂಘಟನೆಗಳೊಂದಿಗೆ ಸೇರಿ 1980ರಲ್ಲಿ ಒಂದು ಹೋರಾಟ ಪ್ರಾರಂಭಿಸಿ, ದೊಡ್ಡ ಮೆರವಣಿಗೆ ಮಾಡಿತು. ಧರಣಿ ಕೂರುವುದು, ಮುತ್ತಿಗೆ ಹಾಕುವುದು, ಸಾರ್ವಜನಿಕ ರಸ್ತೆ ತಡೆ, ಸರ್ಕಾರಿ ವಾಹನಗಳ ತಡೆ, ಸೆಕ್ರೆಟೇರಿಯಟ್, ಮೀನುಗಾರರ ಕಲ್ಯಾಣ ಇಲಾಖೆಯ ಮುಂದೆ ಧರಣಿ - ಮುಷ್ಕರ ಹೀಗೆ ಅನೇಕ ರೀತಿಯ ಹೋರಾಟಗಳಲ್ಲಿ ನಿರಂತರವಾಗಿ ತೊಡಗಿಸಿಕೊಂಡದ್ದರ ಫಲವಾಗಿ ಸರ್ಕಾರವು ಮೂರು ವಿಶೇಷ ಬಸ್ಸುಗಳನ್ನು ಮೀನುಗಾರ ಹೆಂಗಸರಿಗಾಗಿ ಪ್ರಾರಂಭಿಸಿತು. ಕ್ರಮೇಣ ಬೇರೆಬೇರೆ ಸ್ಥಳಗಳಲ್ಲಿ ಕೂಡಾ ಮೀನುಗಾರ ಹೆಂಗಸರಿಗಾಗಿ ಬಸ್ಸುಗಳು ಪ್ರಾರಂಭವಾದವು. ಬಸ್ಸುಗಳು ಸರಿಯಾದ ರೀತಿಯಲ್ಲಿ ಕಾರ್ಯನಿರ್ವಹಿಸುತ್ತಿವೆಯೋ ಇಲ್ಲವೋ ಎನ್ನುವುದನ್ನು ಪರಿವೀಕ್ಷಿಸಲು ಮೀನುಗಾರ ಮಹಿಳೆಯರ ಕೆಲವು ಸಮಿತಿಗಳನ್ನು ಕೂಡಾ ಮಾಡಲಾಯಿತು. ಅನಂತರ ಸರ್ಕಾರವು ಬಸ್ಸುಗಳನ್ನು 'ಮತ್ಸ್ಯಫೆಡ್' ಎಂಬ ಸಹಕಾರಿ ಸಂಘಗಳ ಒಂದು ಸಂಸ್ಥೆಗೆ ವಹಿಸಿಕೊಟ್ಟಿತು. ಆದರೆ ಮತ್ಸ್ಯಫೆಡ್‌ನ ಅಸಡ್ಡೆ, ಬೇಜವಾದ್ದಾರಿ, ನಿರ್ಲಕ್ಷದ ವಿರುದ್ಧ 2004ರಲ್ಲಿ ದೊಡ್ಡ ಹೋರಾಟವನ್ನು 'ತೀರ ದೇಸ ವೇದಿಕೆ' ಹಮ್ಮಿಕೊಳ್ಳುವಂತಾಯಿತು. ಮಹಿಳಾ ಮೀನುಗಾರರ ಈ ಹೋರಾಟದಿಂದಾಗಿ ಅನೇಕ ವಿಶೇಷ ಬಸ್ಸುಗಳು ಮೀನುಗಾರ ಹೆಂಗಸರಿಗಾಗಿ ಪ್ರಾರಂಭವಾದವು.

**ಮೀನು ಮಾರಾಟ ಕೇಂದ್ರಗಳ ಮರುಹಿಡಿತಕ್ಕಾಗಿ ಹೋರಾಟ**

ಮಹಿಳಾ ಮೀನುಗಾರರು ಪುರುಷ ಮೀನು ಮಾರಾಟಗಾರರಿಂದ, ಗುತ್ತಿಗೆದಾರರಿಂದ ಹಾಗೂ ತೆರಿಗೆ ವಸೂಲಿದಾರರಿಂದ ಕಿರುಕುಳ ಅನುಭವಿಸುತ್ತಲೇ ಇದ್ದರು. ಸ್ವಚ್ಛವಿಲ್ಲದ ಸ್ಥಳದಲ್ಲಿ ಮೀನು ಮಾರಾಟ, ಶೆಡ್, ಮೇಜು, ಶೌಚಾಲಯ, ಬಟ್ಟೆ ಬದಲಾಯಿಸಲು ಸ್ಥಳದ ಕೊರತೆ, ಶೀತಲಪೆಟ್ಟಿಗೆ ದೊರಕದಿರುವುದು, ಕುಡಿಯುವ ನೀರಿನ ಕೊರತೆ, ಬಡ್ಡಿದಾರರು ಮತ್ತು ಮಧ್ಯವರ್ತಿಗಳಿಂದ ಕಿರುಕುಳ, ಗುತ್ತಿಗೆದಾರರ ಗೂಂಡಾಗಳಿಂದ ದೈಹಿಕ ಹಿಂಸೆ, ಅತ್ಯಾಚಾರ ಮತ್ತು ಇತರ ರೀತಿಯ ಲೈಂಗಿಕ ಕಿರುಕುಳ - ಇವು ವ್ಯಾಪಾರ ಕೇಂದ್ರದ ಮಹಿಳಾ ಮೀನುಗಾರರು ಎದುರಿಸುತ್ತಿರುವ ಸಾಮಾನ್ಯ ಕಿರುಕುಳಗಳು.

ಮನೆಗೆಲಸದ ಜೊತೆಗೆ ಮೀನು ಮಾರಾಟ ವೃತ್ತಿಯನ್ನೂ ಮಾಡಬೇಕಾಗಿರುವುದರಿಂದ ಅನೇಕ ರೀತಿಯ ತೊಂದರೆಯನ್ನು ಈ ಹೆಂಗಸರು ಅನುಭವಿಸುತ್ತಾರೆ. ಮೀನು ಬೇಗ ಹಾಳಾಗುವ ವಸ್ತುವಾದ್ದರಿಂದ, ಶೀತಲ ಪೆಟ್ಟಿಗೆಗಳ ಸೌಲಭ್ಯಗಳು ಇವರಿಗೆ ದೊರಕದೇ ಇರುವುದರಿಂದ ಇವರ ಮೀನು ವ್ಯಾಪಾರ ಅದೃಷ್ಟದ ಆಟವಾಗಿರುತ್ತದೆ.

ರಾಜಕೀಯ ವ್ಯಕ್ತಿಗಳ ಜೊತೆಗೆ ಅನೈತಿಕವಾದ ವ್ಯಾಪಾರ, ವ್ಯವಹಾರ ಸಂಬಂಧ ಹೊಂದಿದ ದೊಡ್ಡದೊಡ್ಡ ಗುತ್ತಿಗೆದಾರರು ರಾಜಕೀಯ ವ್ಯಕ್ತಿಗಳ ಪರವಾಗಿ ಈ ಮೀನು ವ್ಯಾಪಾರಕೇಂದ್ರಗಳನ್ನು ನಡೆಸುತ್ತಿರುತ್ತಾರೆ. ಬೋರ್ಡ್ ಎಂಜಿನ್‌ಗಳಿಂದ ಮೀನು ನೌಕೆಯನ್ನು ನಡೆಸತೊಡಗಿದ್ದರಿಂದ ಪುರುಷ ಮೀನುಗಾರರು ಕೆಲಸಗಳಿಲ್ಲದೇ ಕುಡಿಯುವ ಚಟಕ್ಕೆ, ಜೂಜಿನ ಚಟಗಳಿಗೆ ಬೀಳುತ್ತಾರೆ. ಆಗ ಮನೆಗಳನ್ನು, ಸಂಸಾರಗಳನ್ನು ತೂಗಿಸಿಕೊಂಡು ಹೋಗುವ ಹೊರೆ ಹೆಂಗಸರದ್ದಾಗಿರುತ್ತದೆ.

ಬೇಗ ಏಳುವುದು, ಮನೆಗೆಲಸ ಮಾಡುವುದು, ಬೇರೆಬೇರೆ ವ್ಯಾಪಾರ ಕೇಂದ್ರಗಳಿಗೆ ಓಡುವುದು, ಗುತ್ತಿಗೆದಾರರ ಮರ್ಜಿ ಹಿಡಿಯುವುದು ಇವರಿಗೆ ಅನಿವಾರ್ಯವಾಗುತ್ತದೆ. ಜಾಗತೀಕರಣ ಪುರುಷ ಹಾಗೂ ಮಹಿಳೆಯ ಮಧ್ಯ ಒಂದು ರೀತಿಯ ಕಂದರವನ್ನು ಹುಟ್ಟುಹಾಕಿದೆ. ಪುರುಷರು ಮೊಬೈಲ್ ಫೋನ್, ದ್ವಿಚಕ್ರವಾಹನಗಳಿಂದಾಗಿ ಬೇಗ ಬೇಗ ಮಾಹಿತಿಗಳನ್ನು ಸಂಗ್ರಹಿಸಿದರೆ, ಸಾಂಸ್ಕೃತಿಕ ಹಾಗೂ ಆರ್ಥಿಕ ಕಾರಣಗಳಿಂದಾಗಿ ಮಹಿಳೆಯರ ಮಾಹಿತಿ ಸಂಗ್ರಹಣಾಕಾರ್ಯ ಕೂಡಾ ನಿಧಾನಗತಿಯಲ್ಲಿ ಸಾಗುತ್ತದೆ. ವ್ಯಾಪಾರ ಕೇಂದ್ರಗಳಲ್ಲಿ ಅತ್ಯಂತ ಕೊಳಕು ಪ್ರದೇಶಗಳನ್ನು ಮೀನುಗಾರ ಮಹಿಳೆಯರಿಗೆ ನೀಡಲಾಗುತ್ತದೆ. ಮೀನು ಮಾರಾಟ ತೆರಿಗೆ ವಸೂಲಿ ಮಾಡುವ ಗುತ್ತಿಗೆದಾರರ ಗೂಂಡಾಗಳು ಇವರ ಮೇಲೆ ನಡೆಸುವ ದೌರ್ಜನ್ಯಕ್ಕೆ ಕೊನೆಯೇ ಇಲ್ಲ ಎಂಬಂತಿರುತ್ತದೆ.

ವ್ಯಾಪಾರ ಕೇಂದ್ರದಲ್ಲಿ ನಡೆಯುವ ಅನ್ಯಾಯಗಳನ್ನು ಪ್ರತಿಭಟಿಸುವ ಹೋರಾಟಕ್ಕೆ ಒಂದು ಹೊಸ ರಾಜಕೀಯ ಯೋಜನೆ, ತಂತ್ರಗಳನ್ನು ಬಳಸುವುದು ಅನಿವಾರ್ಯವಾಗಿತ್ತು. ಹಾಗಾಗಿ ಅನೇಕ ಮಹಿಳಾ ಹೋರಾಟಗಾರರು ಇದರಲ್ಲಿ ತೊಡಗಿಸಿಕೊಂಡು ಒಂದು ಸಮೀಕ್ಷೆಯನ್ನು ನಡೆಸಿದರು. ಸಮೀಕ್ಷೆಯ ವರದಿಯನ್ನು ಆಧರಿಸಿ 'ತೀರದೇಸ ಮಹಿಳಾ ವೇದಿ' ಸರ್ಕಾರದ ಜೊತೆಗೆ ಅನೇಕ ಸುತ್ತಿನ ಮಾತುಕತೆಯನ್ನು ನಡೆಸಿತು. ಇವು ಫಲಪ್ರದವಾಗದಿದ್ದಾಗ 'ತೀರದೇಸ ಮಹಿಳಾ ವೇದಿ' ಮಹಿಳಾ

ಮೀನುಗಾರರ ಮಾರಾಟಕೇಂದ್ರದ ಸಮಸ್ಯೆಗಳನ್ನು ಒಂದೊಂದಾಗಿ ಕೈಗೆತ್ತಿಕೊಂಡು ಹೋರಾಟ ನಡೆಸಿತು.

ಮೊದಲನೆಯದಾಗಿ ಶ್ರೀ ಕರ್‍ಯಾಯಮ್ ಪಂಚಾಯತ್ ಮಾರಾಟ ಕೇಂದ್ರವನ್ನು ಪ್ರಾರಂಭ ಮಾಡಿದರು. ಇದರ ಉದ್ದೇಶ ಒಂದು ಮಾದರಿ ವ್ಯಾಪಾರ ಕೇಂದ್ರವನ್ನು ಪ್ರಾರಂಭ ಮಾಡುವುದಾಗಿತ್ತು. ಪಂಚಾಯತಿಯ ಸದಸ್ಯರು, ಮೀನುಗಾರ ಸಂಸ್ಥೆಯ ಅಧಿಕಾರಿಗಳು ಹಾಗೂ ಮತ್ಸ್ಯಫೆಡ್ ಫೆಡರೇಶನ್ ಇವರೊಂದಿಗೆ ಚರ್ಚೆ ಮಾಡಿ 1989-90ರಲ್ಲಿ ಈ ವ್ಯಾಪಾರ ಕೇಂದ್ರವನ್ನು ಪ್ರಾರಂಭ ಮಾಡಿದರು. ಈ ವ್ಯಾಪಾರ ಕೇಂದ್ರ ಇತರ ಕೇಂದ್ರಗಳಿಗೆ ಈಗ ಮಾದರಿಯಾಗಿದೆ. ವ್ಯಾಪಾರ ಕೇಂದ್ರವನ್ನು ಮಹಿಳೆಯರಿಗೆ ಪೂರಕವಾಗಿ ಕಟ್ಟುವುದು ಇವರ ಮುಖ್ಯ ಉದ್ದೇಶವಾಗಿತ್ತು. ಶ್ರೀ ಕರ್‍ಯಾಯಮ್ ಮಾದರಿಯಲ್ಲಿಯೇ ಬೇರೆಬೇರೆ ವ್ಯಾಪಾರ ಕೇಂದ್ರಗಳನ್ನು ಕಟ್ಟಲು ಹೋರಾಟ ನಡೆಸಿದರು. ಇದರ ಫಲವಾಗಿ ಜನತಾ ಯೋಜನೆಯ ಅಡಿಯಲ್ಲಿ ಕಾರ್ಪೊರೇಷನ್‌ನವರು 25 ರಿಂದ 27 ಲಕ್ಷ ಖರ್ಚು ಮಾಡಿ ಅನೇಕ ವ್ಯಾಪಾರ ಕೇಂದ್ರಗಳನ್ನು

*1997ರಲ್ಲಿ ಫಾಜಿಲ ಎಂಬ ಯೂನಿಯನ್ ಕಾರ್ಯಕರ್ತೆಯನ್ನು ಸೂಳೆಗಾರಿಕೆ ಮಾಡುತ್ತಾಳೆಂದು ಬಸ್‌ನಿಲ್ದಾಣದಿಂದ ಬಂಧಿಸಿ ಕರೆದುಕೊಂಡು ಹೋಗಲಾಯಿತು. ಆಕೆಯನ್ನು ಎರಡು ದಿನಗಳ ಕಾಲ ಪೊಲೀಸ್ ಠಾಣೆಯಲ್ಲಿಯೇ ಇರಿಸಿಕೊಂಡು ಕಿರುಕುಳ ನೀಡಲಾಯಿತು. ಮಹಿಳಾ ವೇದಿ ಇತರ ಮಹಿಳಾ ಕಾರ್ಯಕರ್ತೆಯರೊಂದಿಗೆ ಸೆಕ್ರೆಟೇರಿಯಟ್ ಮುಂದೆ ಧರಣಿ, ಮುಷ್ಕರ ನಡೆಸಿತು. ಒಟ್ಟು 300 ಮಹಿಳೆಯರು ಈ ಧರಣಿಯಲ್ಲಿ ಭಾಗವಹಿಸಿದ್ದರು. ಫಾಜಿಲಳನ್ನು ತಕ್ಷಣವೇ ಬಿಡುಗಡೆ ಮಾಡಬೇಕೆಂಬುದು ಅವರ ಬೇಡಿಕೆಯಾಗಿತ್ತು. ಅನಂತರದಲ್ಲಿ ಪೊಲೀಸರು ಆಕೆಯನ್ನು ಬಿಡುಗಡೆ ಮಾಡಿದರು. ತಾವು ಫಾಜಿಲಳನ್ನು ಬೇರೆ ಯಾರೋ ಎಂದು ಭಾವಿಸಿ ಬಂಧಿಸಿದುದಾಗಿ ಹೇಳಿ ತಮ್ಮ ತಪ್ಪನ್ನು ಒಪ್ಪಿಕೊಂಡರು.*

ಕಟ್ಟಿದರು. ಶೆಡ್‌ಗಳು, ಹಾಗೂ ಇತರ ಸೌಲಭ್ಯಗಳನ್ನು ಈ ವ್ಯಾಪಾರ ಕೇಂದ್ರದಲ್ಲಿ ಮಾಡಿದ್ದಾಗಲೂ ಸಹ ಅವುಗಳ ನಿರ್ವಹಣೆ ಸರಿಯಾದ ರೀತಿಯಲ್ಲಿ ನಡೆಯುತ್ತಿರಲಿಲ್ಲ. ಮತ್ತೆ ಮೀನುಗಾರ ಮಹಿಳೆಯರು ಶೆಡ್, ನೀರಿನ ಕೊಳವೆ, ಶೌಚಾಲಯಗಳ ಉತ್ತಮ ನಿರ್ವಹಣೆಗಾಗಿ ಹೋರಾಟ ನಡೆಸುವಂತಾಯಿತು.

1989-90ರಲ್ಲಿ ಪನ್‌ಗೊಡು ವ್ಯಾಪಾರ ಕೇಂದ್ರದಲ್ಲಿ ಗೂಂಡಾಗಳ ದೌರ್ಜನ್ಯದ ವಿರುದ್ಧ, ಮೀನುಗಳ ಗುಣಮಟ್ಟ ಹಾಗೂ ಪ್ರಮಾಣದ ಬಗ್ಗೆ ಹೋರಾಟವನ್ನು ಹಮ್ಮಿಕೊಳ್ಳಲಾಯಿತು. ಮೀನುಗಳ ಹರಾಜು ನಡೆಯುವಾಗ ಮೀನು ತುಂಬಿರುವ ಪೆಟ್ಟಿಗೆಗಳನ್ನು ಲಾರಿಯಲ್ಲಿ ಇಡಲಾಗುತ್ತದೆ.

ಮೀನು ಪೆಟ್ಟಿಗೆಗಳನ್ನು ಕೆಳಗಿಳಿಸುವಾಗ ಗೂಂಡಾಗಳು ಕೈಗೆ ಸಿಕ್ಕಷ್ಟು ಮೀನುಗಳನ್ನು ಒತ್ತಾಯದಿಂದ ಕಿತ್ತುಕೊಂಡು ಪರಾರಿಯಾಗಿ ಬಿಡುತ್ತಿದ್ದರು. ಈ ಸಮಸ್ಯೆ ಕುರಿತು ಹೋರಾಡಲು ಮೀನುಗಾರ ಮಹಿಳೆಯರ ಸಮಿತಿಗಳು ಪ್ರಾರಂಭವಾದವು. ಅನೇಕ ಚರ್ಚೆಗಳ ನಂತರ ಮೀನುಗಳ ಮಾರಾಟವನ್ನು ಬೆಳಗ್ಗೆ 6 ಗಂಟೆಯ ಮೇಲೆಯೇ ಮಾಡಬೇಕೆಂದೂ, ಗೂಂಡಾಗಳ ದೌರ್ಜನ್ಯಕ್ಕೆ ತೆರೆ ಎಳೆಯಲೇಬೇಕೆಂದೂ ತೀರ್ಮಾನಿಸಲಾಯಿತು. ಈ ಸಮಿತಿ ಪೊಲೀಸ್ ಕಮಿಷನರನ್ನು ಭೇಟಿ ಮಾಡಿ ಬೇಡಿಕೆ ಇಟ್ಟಿತು. ತಕ್ಷಣವೇ ಪೊಲೀಸ್ ಪಡೆಯನ್ನು ಬೆಳಗ್ಗೆ 5 ರಿಂದ 7ರ ವರೆಗೆ ನಿರೀಕ್ಷಣೆಗಾಗಿ ನಿಯೋಜಿಸಲಾಯಿತು. ಈ ರೀತಿ ಮೀನುಗಾರ ಮಹಿಳೆಯರ ಸಮಸ್ಯೆಗಳಿಗೆ ಅವರ ಭಾಗವಹಿಸುವಿಕೆ ಹಾಗೂ ಹೋರಾಟದಿಂದಾಗಿಯೇ ಪರಿಹಾರ ಸಿಗುವಂತಾಯಿತು.

1998-99ರಲ್ಲಿ ಕಜಾಕೊಟ್ಟಮ್‌ನಲ್ಲಿ ಶೆಡ್ ಸೌಲಭ್ಯಕ್ಕಾಗಿ, ವ್ಯಾಪಾರ ಮಾಡಲು ಕುಳಿತುಕೊಳ್ಳುವ ಸ್ಥಳಕ್ಕಾಗಿ, ನೀರಿನ ಕೊಳವೆಗಳ ಸಂಪರ್ಕಕ್ಕಾಗಿ, ಶೌಚಾಲಯ ಸೌಲಭ್ಯಗಳಿಗಾಗಿ ಹೋರಾಟ ನಡೆಸಲಾಯಿತು.

2001ರಲ್ಲಿ ಮಾವಲಿಕ್ಕರ ವ್ಯಾಪಾರ ಕೇಂದ್ರದಲ್ಲಿ ಹೋರಾಟ ನಡೆಸಲಾಯಿತು. ಈ ವ್ಯಾಪಾರ ಕೇಂದ್ರದಲ್ಲಿ ಅತ್ಯಂತ ಕೊಳಕು ಪ್ರದೇಶದಲ್ಲಿ ಮಹಿಳಾ ಮೀನುಗಾರರು ಮೀನುಗಳನ್ನು ಮಾರಾಟ ಮಾಡಬೇಕಾಗಿತ್ತು. ಈ ವ್ಯಾಪಾರ ಕೇಂದ್ರದ ಹರಾಜು ಗುತ್ತಿಗೆದಾರರು ಅತ್ಯಂತ ನಿರ್ಲಕ್ಷ ತೋರಿಸುತ್ತಿದ್ದರು. ಈ ಸಮಸ್ಯೆಗೆ ಸ್ಪಂದಿಸದ ಗುತ್ತಿಗೆದಾರ ದಿನಕ್ಕೆ 30 ರೂ. ನಂತೆ ತೆರಿಗೆಯನ್ನು ಏರಿಸಿದನು. ವ್ಯಾಪಾರ ಕೇಂದ್ರ ನಡೆಯದ ರಜಾದಿನಗಳಿಗೂ ಸಹ ಮಹಿಳಾ ಮೀನುಗಾರರು ತೆರಿಗೆ ನೀಡಬೇಕಾಗಿತ್ತು. ತೆರಿಗೆ ಕೊಡದವರನ್ನು ದೈಹಿಕವಾಗಿ ಹಿಂಸಿಸುವುದು, ಅವರ ಮೀನುಗಳನ್ನು ನಾಶಮಾಡುವುದು ಗುತ್ತಿಗೆದಾರರ ಗೂಂಡಾಗಳಿಗೆ ಸಾಮಾನ್ಯ ವಿಷಯವಾಗಿತ್ತು. ಈ ಎಲ್ಲಾ ದೌರ್ಜನ್ಯಗಳನ್ನು ಗುತ್ತಿಗೆದಾರರ ಗಮನಕ್ಕೆ ತರಲಾಯಿತಾದರೂ ಆತ ಯಾವುದೇ ಆಸಕ್ತಿ ತೋರಿಸಲಿಲ್ಲ. ಅವನು ಪೊಲೀಸರಿಗೆ ಹೇಳಿದರೂ ಸಹ ಅವನದೇ ಆದ ರೀತಿಯಲ್ಲಿ ಹೇಳುತ್ತಿದ್ದ. ಈ ಹಂತದಲ್ಲಿ ಮೀನುಗಾರ ಮಹಿಳೆಯರು ಹೋರಾಟಕ್ಕೆ ಇಳಿದರು. ಸ್ವತಂತ್ರ ಮತ್ಸ್ಯ ತೊಜಿಲಾಲಿ ಫೆಡರೇಶನ್ ಸಂಸ್ಥೆಯೊಡಗೂಡಿ ನಡೆಸಿದ ಅನೇಕ ಹೋರಾಟಗಳಿಂದಾಗಿ ಪೊಲೀಸರು ತಕ್ಷಣವೇ ಕಾರ್ಯಪ್ರವೃತ್ತರಾದರು. ಗುತ್ತಿಗೆದಾರ ತೆರಿಗೆಯನ್ನು 30 ರಿಂದ 18 ರೂ.ಗೆ ಇಳಿಸಲು ಒಪ್ಪಿಕೊಂಡನು. ಅನಂತರದ ವರ್ಷಗಳಲ್ಲಿ ಮುನ್ಸಿಪಾಲಿಟಿಯವರು ನೇರವಾಗಿ ತೆರಿಗೆಯನ್ನು ಸಂಗ್ರಹಿಸಲು ಪ್ರಾರಂಭಿಸಿದಾಗ ಅದು 13 ರೂ.ಗೆ ಇಳಿಯಿತು. ಮತ್ತೊಬ್ಬ ಗುತ್ತಿಗೆದಾರ ಬಂದಾಗ ತೆರಿಗೆಯನ್ನು ಹೆಚ್ಚಿಸಲು ಪ್ರಯತ್ನಪಟ್ಟಾಗ್ಯೂ ಸಹ ಅದು ಸಾಧ್ಯವಾಗಲಿಲ್ಲ. ಏಕೆಂದರೆ ಮಹಿಳಾ ಮೀನುಗಾರರು ಹೆಚ್ಚಿನ ತೆರಿಗೆ ಕೊಡುವುದಿಲ್ಲವೆಂದು ಬಲವಾದ ಪಟ್ಟು ಹಿಡಿದಿದ್ದರು. ಕೊನೆಗೆ ಮಾರಾಟ ತೆರಿಗೆ ವಸೂಲಿ ಹಾಗೂ ವ್ಯಾಪಾರ ಕೇಂದ್ರದ ಮೇಲ್ವಿಚಾರಣೆಯನ್ನು ಮಹಿಳಾ ಮೀನುಗಾರ ಸಮಿತಿಗಳಿಗೆ ಹಾಗೂ ಸ್ವತಂತ್ರ ಮತ್ಸ್ಯ ತೊಜಿಲಾಲಿ ಫೆಡರೇಶನ್ ಸಂಸ್ಥೆಗೆ ವಹಿಸಿಕೊಡಲಾಯಿತು. ಅಂದಿನಿಂದ ಈ ಎರಡು ಸಂಘಟನೆಗಳೇ ಮೀನುಗಾರರಿಗೆ, ಮೀನುಗಾರ ಮಹಿಳೆಯರಿಗೆ ಅನುಕೂಲವಾಗುವಂತೆ ವ್ಯಾಪಾರ ಕೇಂದ್ರಗಳನ್ನು ನಡೆಸಿಕೊಂಡು ಬರುತ್ತಿವೆ.

2001ರಲ್ಲಿ ಶ್ರೀ ಕರ್‍ಯಾಯಮ್ ಪಂಚಾಯತಿ ವ್ಯಾಪಾರ ಕೇಂದ್ರದಲ್ಲಿ ಇಬ್ಬರು ಮೀನುಗಾರ ಹೆಂಗಸರು ಮೀನು ಮಾರಾಟ ಮಾಡುವಾಗ ಅವರ ಮೇಲೆ ದೈಹಿಕ ಹಿಂಸೆ ನಡೆಸಿದ ಕಾರಣಕ್ಕಾಗಿ ಇಬ್ಬರು ಅಪರಾಧಿಗಳ ವಿರುದ್ಧ ಹೋರಾಟ ನಡೆಸಲಾಯಿತು. ಈ ಹೋರಾಟದ ಫಲವಾಗಿ ಸರ್ಕಾರ ಮಧ್ಯ ಪ್ರವೇಶಿಸಿ ಆ ಇಬ್ಬರಿಗೆ ಶಿಕ್ಷೆಯನ್ನು ವಿಧಿಸಿತು.

2004ರಲ್ಲಿ ಪುನಕ್ಕಾಗು ವ್ಯಾಪಾರ ಕೇಂದ್ರದಲ್ಲಿ ಮಹಿಳಾ ಮೀನುಗಾರರ ಹೋರಾಟ ನಡೆಯಿತು. ಈ ಕೇಂದ್ರದಲ್ಲಿ ಮಹಿಳಾ

ಮೀನುಗಾರರು ಮಧ್ಯರಾತ್ರಿ 2 ಗಂಟೆಯವರೆಗೆ ಮೀನು ಮಾರಾಟ ಮಾಡುತ್ತಿದ್ದರು. ಅನೇಕ ಸಲ ಗೂಂಡಾಗಳು ಇವರ ಮೇಲೆ ದೌರ್ಜನ್ಯ ನಡೆಸಿದರೆ, ಪೊಲೀಸರೂ ಸಹ ಇವರಿಂದ ಹಣ ಕಸಿಯುತ್ತಿದ್ದರು. ಒಮ್ಮೆ ಔಷಧಿ ಅಂಗಡಿಯವನೊಬ್ಬನು ನೀಡಿದ ಫಿರ್ಯಾದಿನಿಂದಾಗಿ ಈ ಮೀನುಗಾರ ಮಹಿಳೆಯರು ಬೀದಿಬದಿಯಲ್ಲಿ ಮೀನು ಮಾರಾಟ ಮಾಡುವುದಕ್ಕೆ ತಡೆ ಉಂಟುಮಾಡಲಾಗಿತ್ತು. ದಾರಿಯಲ್ಲಿ ಮೀನು ಮಾರಬಾರದೆಂದು ರಾಜಕೀಯ ಪಕ್ಷಗಳ ಕಾರ್ಯಕರ್ತರು, ಪೊಲೀಸ್, ಆರೋಗ್ಯ ಇಲಾಖೆಯ ಅಧಿಕಾರಿಗಳು, ಕಾರ್ಪೊರೇಷನ್ ಅಧಿಕಾರಿಗಳು ಎಲ್ಲರೂ ಸೇರಿ ಮೀನುಗಾರ ಹೆಂಗಸರಿಗೆ ತಾಕೀತು ಮಾಡಿದ್ದರು. ಕೆಲವರು ಮೀನುಗಳ ಮೇಲೆ ಸೀಮೆಎಣ್ಣೆ ಚಿಮುಕಿಸುವ ಮೂಲಕ ಎಲ್ಲಾ ಮೀನುಗಳನ್ನು ನಾಶ ಮಾಡಿದ್ದರು. ಇದರಿಂದಾಗಿ ಮನನೊಂದ ಮೀನುಗಾರ ಮಹಿಳೆಯರು ಬಲವಾಗಿ ವಿರೋಧಿಸಿದ್ದಲ್ಲದೇ, ಅಲ್ಲಿಯೇ ಮೀನು ಮಾರಾಟ ಮಾಡುವುದನ್ನು ಮುಂದುವರಿಸಿದರು. ಎರಡೂ ಬಣಗಳ ನಡುವೆ ಅನೇಕ ವಾದ-ವಿವಾದಗಳು ನಡೆದು ಅನಂತರ ಎರಡೂ ಬಣಗಳ ವಿವಾದ ಬಗೆಹರಿಸಲು ಒಂದು ಸಭೆಯನ್ನು ನಡೆಸಲು ಒಪ್ಪಿಕೊಳ್ಳಲಾಯಿತು. ಮರುದಿನ ಮೀನುಗಾರ ಮಹಿಳೆಯರು ಮಾತ್ರ ಸಭೆಗೆ ಬಂದರು. ಆದರೆ ಇನ್ನೊಂದು ಪಕ್ಷದವರು ಸಭೆಗೆ ಬರಲಿಲ್ಲ. ತೀರದೇಸ ಮಹಿಳಾ ವೇದಿ ಮತ್ತು ಸ್ವತಂತ್ರ ಮತ್ಸ್ಯ ತೊಜಿಲಾಲ್ ಫೆಡರೇಶನ್‌ರವರು ಜೊತೆಯಾಗಿ ಹೋರಾಟ ನಡೆಸಿದ ಪರಿಣಾಮವಾಗಿ ಪೊಲೀಸರು ಮೀನುಗಾರ ಮಹಿಳೆಯರಿಗೆ ತೊಂದರೆ ಕೊಡುವವರ ವಿರುದ್ಧ ಕ್ರಮ ತೆಗೆದುಕೊಳ್ಳುವಂತಾಯಿತು.

ಇದೇ ರೀತಿಯ ಘರ್ಷಣೆ 2005ರಲ್ಲಿ ಕೇಶವದಾಸಪುರಂನಲ್ಲಿ ನಡೆಯಿತು. ದಾರಿಯಲ್ಲಿ ಮೀನು ಮಾರಾಟ ಮಾಡುವ ಹೆಂಗಸರಿಗೆ ಜಾಗ ಖಾಲಿ ಮಾಡುವಂತೆ ಹೇಳಲಾಗಿತ್ತು. ಏಕೆಂದರೆ ಅವರ ಪ್ರಕಾರ ಅದು 'ಸ್ವಚ್ಛ ಪ್ರದೇಶ'ವಾಗಿತ್ತು. ಅಲ್ಲಿಯೇ ವಾಸವಾಗಿದ್ದ ಪೊಲೀಸ್ ಅಧಿಕಾರಿಯೊಬ್ಬ ಮೀನುಗಾರ ಮಹಿಳೆಯರ ವಿರುದ್ಧ ಫಿರ್ಯಾದು ನೀಡಿದ್ದರು. ಪೊಲೀಸ್ ಅಧಿಕಾರಿಯೇ ಫಿರ್ಯಾದು ನೀಡಿದ್ದರಿಂದ ಇಡೀ ಪೊಲೀಸ್ ಇಲಾಖೆ ತಕ್ಷಣವೇ ಕ್ರಮ ಕೈಗೊಂಡಿದ್ದಲ್ಲದೇ ಮೀನುಗಾರ ಮಹಿಳೆಯರ ಮೀನು ತುಂಬಿದ ಬುಟ್ಟಿಗಳನ್ನು ಬಲವಂತವಾಗಿ ಕಸಿದುಕೊಂಡಿತು. ಅವರು ಜಾಗ ಖಾಲಿ ಮಾಡುವಂತೆ ಪೊಲೀಸರು ಒತ್ತಾಯ ಮಾಡಿದರು. ಈ ಘರ್ಷಣೆ ಸದಾ ನಡೆಯುತ್ತಲೇ ಇರುತ್ತದೆ. 'ತೀರದೇಸ ಮಹಿಳಾ ವೇದಿ' ಇಲ್ಲಿಯೂ ಹೋರಾಟ ನಡೆಸಿತು. ಮೀನುಗಾರ ಮಹಿಳೆಯರು ಹಾಗೂ ತರಕಾರಿ ಮಾರಾಟಗಾರರು ಈ ಹೋರಾಟದಲ್ಲಿ ಪಾಲ್ಗೊಂಡರು. ಒಂದು ಸಂದರ್ಭದಲ್ಲಿ ಅವರು ತಲೆಯ ಮೇಲೆ ಮೀನು ತುಂಬಿದ ಬುಟ್ಟಿಗಳನ್ನು ಹೊತ್ತುಕೊಂಡು ಕಾರ್ಪೊರೇಷನ್‌ಗೆ ನಡೆದು ಹೋಗಿ ದಾರಿಯ ಪಕ್ಕದಲ್ಲಿ ಮೀನು ಮಾರಾಟ ಮಾಡುವ ಹಕ್ಕು ನೀಡಬೇಕೆಂದು ಬೇಡಿಕೆ ಸಲ್ಲಿಸಿದರು. ಎಲ್ಲಾ ಹೋರಾಟಗಾರರನ್ನು ಬಂಧಿಸಿ ಮ್ಯೂಸಿಯಂ ಪೊಲೀಸ್ ಠಾಣೆಗೆ ಕರೆದೊಯ್ಯಲಾಯಿತು. ಕಾರ್ಪೊರೇಷನ್ನಿನ ಮೇಯರ್ ಮಧ್ಯ ಪ್ರವೇಶಿಸಿ ಕೇಶವಪುರಂನ ದಾರಿಯ ಪಕ್ಕದಲ್ಲಿ ಮೀನು ಮಾರಾಟವನ್ನು ಮೀನುಗಾರ ಮಹಿಳೆಯರು ಮುಂದುವರಿಸಬಹುದೆಂದು ಆಶ್ವಾಸನೆ ಇತ್ತರು.

ಈ ಎಲ್ಲಾ ಹೋರಾಟಗಳಿಂದಾಗಿ ಮೀನುಗಾರ ಮಹಿಳೆಯರು ಇಂದು ಹೆಚ್ಚು ಜಾಗೃತರಾಗಿದ್ದಾರೆ. ರಾಜಕೀಯ ಪ್ರಜ್ಞೆ ಹೊಂದಿದವರಾಗಿದ್ದಾರೆ. ವ್ಯಾಪಾರ ಕೇಂದ್ರದ ಸಮಿತಿಯಲ್ಲಿ ಮಹಿಳಾ ಮೀನು ಮಾರಾಟಗಾರರು ಹಾಗೂ ತೀರದೇಸ ಮಹಿಳಾ ವೇದಿ ಸಂಘಟನೆಯು ಹೆಚ್ಚು ಕಾರ್ಯಶೀಲರಾಗಿರುವುದಲ್ಲದೇ ಎಚ್ಚರಿಕೆಯಿಂದ ಇರುತ್ತದೆ. ಯಾವುದಾದರೂ ಸಮಸ್ಯೆ ಉದ್ಭವವಾದರೆ ತಕ್ಷಣವೇ ಕಾರ್ಯಪ್ರವೃತ್ತರಾಗುವಂತಹ ಒಂದು ನೆಟ್‌ವರ್ಕನ್ನು ಬೆಳೆಸಿಕೊಂಡು ಹೋರಾಟ ನಡೆಸಿದ್ದಾರೆ. ಹೀಗೆ, ಬದುಕಿ ಉಳಿಯಲು ಮೀನುಗಾರ ಮಹಿಳೆಯರು ಹೋರಾಟದ ಹಾದಿಯನ್ನು ಆರಿಸಿಕೊಂಡು, ಮೀನುಗಾರ ವೃತ್ತಿಯನ್ನೂ ನಡೆಸಿಕೊಂಡೂ ಹೋಗುತ್ತಿದ್ದಾರೆ.

ಕನ್ನಡಕ್ಕೆ : *ಚಂಪಾವತಿ ಎಚ್.ಎಸ್.*

---

*2000ದ ವರ್ಷದಲ್ಲಿ ಅಪರಾಧಿಗಳ ಗುಂಪೊಂದು ಪೊನಗುಮೂಡು ವ್ಯಾಪಾರ ಕೇಂದ್ರಕ್ಕೆ ಲಗ್ಗೆ ಹಾಕಿತು. ಅವರು ಅಲ್ಲಿಯ ವ್ಯಾಪಾರಗಾರರನ್ನು ಚಾಕು-ಚೂರಿಯ ಮೂಲಕ ಹೆದರಿಸಿ ಎಲ್ಲಾ ಅಂಗಡಿ-ಮುಂಗಟ್ಟುಗಳನ್ನು ಮುಚ್ಚಿಸಿದರು. ಪ್ಲೋರಿ ಎಂಬ ಮೀನುಗಾರ ಮಹಿಳೆಯನ್ನು ಅಪಹರಿಸಿಕೊಂಡು ಹೋಗಿ ಆಕೆಯ ಮೇಲೆ ಅತ್ಯಾಚಾರವೆಸಗಿದರು. ವ್ಯಾಪಾರ ಕೇಂದ್ರದಲ್ಲಿ ಆಕೆಯ ಜೊತೆಗಿದ್ದ ಇಬ್ಬರು ಹೆಂಗಸರು ಪೊಲೀಸ್ ಠಾಣೆಯಲ್ಲಿ ಫಿರ್ಯಾದು ದಾಖಲಿಸಿದರು. ಪೊಲೀಸರು ಲಕ್ಷ್ಯಕೊಡಲಿಲ್ಲ. ಪೊಲೀಸರ ಈ ನಿರ್ಲಕ್ಷ್ಯವನ್ನು ಖಂಡಿಸಿ 'ತೀರದೇಸ ಮಹಿಳಾ ವೇದಿ' ಕಮಿಷನರ್‌ರವರನ್ನು ಭೇಟಿಯಾದರು. ಅವರು ಸಂಬಂಧಪಟ್ಟ ಪೊಲೀಸ್ ಠಾಣೆಯ ಇಬ್ಬರು ಪೊಲೀಸ್ ಅಧಿಕಾರಿಗಳನ್ನು ಅವರ ನಿರ್ಲಕ್ಷ್ಯಕ್ಕಾಗಿ ಸೇವೆಯಿಂದ ಅಮಾನತುಗೊಳಿಸಿದರು. ಜೊತೆಗೆ ತಿರುಗಾಟದ ಪೊಲೀಸ್ ಪಡೆಗೆ ಎಚ್ಚರಿಕೆ ನೀಡಿದರು. ಆಕೆಯನ್ನು ತಕ್ಷಣವೇ ಹುಡುಕಿ ತರುವಂತೆ ಆಜ್ಞಾಪಿಸಿದರು. 1.30 ಗಂಟೆಯ ನಂತರ ಆಕೆಯನ್ನು ದೂರದ ಸ್ಥಳವೊಂದರಲ್ಲಿ ಅಪಾಯಕರ ಸ್ಥಿತಿಯಲ್ಲಿ ಗುರುತಿಸಿದರು. ಆಕೆ ದೀರ್ಘ ಕಾಲ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯಬೇಕಾಯಿತು. 'ತೀರ ದೇಸ ಮಹಿಳಾ ವೇದಿ' ಪೊಲೀಸ್ ಠಾಣೆಯ ಮುಂದೆ ಧರಣಿ ಮಾಡಿತು ಮತ್ತು ಹೀಗೆಯೇ ಅನೇಕ ಹೋರಾಟದ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿತು. ಅನಂತರ ಅಪರಾಧಿಗಳನ್ನು ಬಂಧಿಸಿ ಶಿಕ್ಷೆಗೆ ಗುರಿಪಡಿಸಲಾಯಿತು. ಈ ರೀತಿಯ ಹೋರಾಟಗಳು ಮೀನುಗಾರ ಮಹಿಳೆಯರ ಭರವಸೆ, ಆತ್ಮಶಕ್ತಿಯನ್ನು ಹೆಚ್ಚಿಸುವುದರಲ್ಲಿ ಮುಖ್ಯ ಪಾತ್ರವನ್ನು ವಹಿಸಿವೆ.*

---

*ಹೆಚ್ಚಿನ ಮಾಹಿತಿಗಾಗಿ ಈ ಕೆಳಕಂಡ ವಿಳಾಸದಲ್ಲಿ ಸಂಪರ್ಕಿಸಿ :*
ಕೆ.ಎಸ್.ಎಂ.ಟಿ.ಎಫ್. ಕಚೇರಿ, ನಂ. 55, ಗರುಡ ಬಿಲ್ಡಿಂಗ್ಸ್
ಜಿ.ಪಿ.ಓ. ಲೇನ್ ಸ್ಟ್ಯಾಚ್ಯು, ತಿರುವನಂತಪುರಂ
ಕೇರಳ - 695001
ಇ-ಮೇಲ್ : tmv@sify.com
ವೆಬ್‌ಸೈಟ್ : www.keralafishworkers.org, www.alakal.net

# ಜೀವ ಸಂಪಿಗೆ ಕಂಪು ಹರಡಲಿ

*ಡಾ॥ ಬಿ.ಎನ್. ಸುಮಿತ್ರಾಬಾಯಿ*

**ಕಾ**ವ್ಯರಚನೆಯನ್ನು ಉಸಿರಾಟದಷ್ಟು ಅನಿವಾರ್ಯವೆಂದು ಗುರುತಿಸಿಕೊಳ್ಳುವ ದು. ಸರಸ್ವತಿಗೆ ಕವಿತೆಗಳನ್ನು ಅಂದಗೊಳಿಸಿ, ಅರ್ಥ ತುಂಬಿಸುವ, ಕಲಾತ್ಮಕವಾಗಿಯೇ ತೀರಬೇಕೆಂಬ ಬೌದ್ಧಿಕ ಮಹತ್ವಾಕಾಂಕ್ಷೆಗಿಂತ ಮಿಗಿಲಾಗಿ ಭಾವತೀವ್ರತೆಯಿಂದ ಸಹಜವಾಗಿ ಹೊಮ್ಮಿಸುವುದೇ ಹೆಚ್ಚು ಪ್ರಿಯವಾದದ್ದು. ಈ ಮಾತಿಗೆ ಅವರ ಮೊದಲನೆಯ ಸಂಕಲನ **'ಹೆಣೆದರೆ ಜೇಡನಂತೆ'**ಯಲ್ಲೇ ನಿದರ್ಶನಗಳಿದ್ದವು. ಎರಡನೆಯ ಸಂಕಲನವಾದ ಈ 'ಜೀವಸಂಪಿಗೆ'ಯ ಕವನಗಳು ನನ್ನ ಆ ಅನಿಸಿಕೆಯನ್ನು ಮತ್ತಷ್ಟು ದೃಢಪಡಿಸುತ್ತವೆ. ಸರಸ್ವತಿ ತುಂಬ ವೈವಿಧ್ಯಮಯ ಆಸಕ್ತಿಗಳುಳ್ಳ ಮಹಿಳೆ. ಮಹಿಳಾ ಚಳವಳಿ, ಅಸಂಘಟಿತ ದುಡಿಮೆಗಾರರ ಚಳವಳಿಗಳೊಂದಿಗೆ ಗಾಢವಾಗಿ ತಮ್ಮನ್ನು ತೊಡಗಿಸಿಕೊಂಡಿರುವ ಅವರಿಗೆ ನಾಟಕ, ಹಾಡುಗಾರಿಕೆ, ಜಾನಪದ, ಚಿತ್ರಕಲೆಗಳಲ್ಲೂ ತುಂಬ ಒಲವು. ಆದರೆ ರಾಜಕೀಯ ಹೋರಾಟವಿರಲಿ, ನಾಟಕಾದಿ ಕಲೆಗಳ ಅನುಭವಗಳಾಗಲಿ ಅವರ ಕವನಗಳ ಚಿಂತನಾಲೋಕದಲ್ಲಿ ಪ್ರತಿಮೆಗಳಾಗಿ ಆಗಲಿ, ಬೇರಾವ ರೂಪದಲ್ಲಾಗಲೀ ನುಗ್ಗಿಬರುವುದಿಲ್ಲ. ಇದು ಆಶ್ಚರ್ಯದ ಸಂಗತಿ! ಬದುಕಿನ ಅನುಭವಗಳೆಲ್ಲ ಅಂತರ್ಮುಖತೆಯಲ್ಲಿ ಲೇಖಕಿಯ ಮನದ ಭಾವ, ಬಿಸುಪು, ಬೇಸರ, ಬೇಗುದಿ, ಹಿಗ್ಗು, ಸಂಕಟ, ವಿಷಾದ, ಬೆರುಗುಗಳ ಕೋಮಲತೆಯಲ್ಲಿ ಅದ್ದಿಕೊಂಡು ಪ್ರಾಮಾಣಿಕತೆಯಿಂದ, ಕಲ್ಮಶ, ಕಿಸುರುಗಳಿಲ್ಲದಂತೆ ಹೊಮ್ಮಿ ಕವನಗಳಾಗಿ ಅರಳಿಕೊಳ್ಳುತ್ತವೆ.

**"ಜೀವಸಂಪಿಗೆ"** ಸಂಕಲನದ ಕವನಗಳಲ್ಲಿ ಅನುಭವವನ್ನು ನೋಡುವ ಕಣ್ಣು ಅರ್ಥೈಸುವ ಮನ ಹೆಣ್ಣಿನದೇ ನಿಜ. ಆದರೆ ಈ ಹೆಣ್ಣಿನ ಅಸ್ಮಿತೆಯ ವಿಭಿನ್ನ ನೆಲೆಯೊಂದನ್ನು ಸರಸ್ವತಿಯ ಕವನಗಳು ಸ್ಥಾಪಿಸಲು ಯತ್ನಿಸುವುದು ಗಮನಾರ್ಹ.

ಸಂಕಲನಕ್ಕೆ ಶೀರ್ಷಿಕೆಯನ್ನು ಒದಗಿಸಿರುವ 'ಜೀವಸಂಪಿಗೆ' ಎಂಬ ಕವನದಲ್ಲಿಯೇ ಈ ಅಂಶವನ್ನು ಗುರುತಿಸಬಹುದು. ಜೀವಜಗತ್ತಿನ ವಿಶಾಲವೂ, ದೀರ್ಘವೂ ಆದ ಚರಿತ್ರೆಯ ಪ್ರತೀಕ ಈ ಜೀವಸಂಪಿಗೆ ಮರ. ಆಳ ಪಾತಾಳದೊಳಗಿರುವ ಈ ಮರ 'ಎಪ್ಪತ್ತೇಳು ಕೋಟಿ ಎತ್ತರಕೆ ಬೆಳೆದ ಮರ'. ಮರದ ಮುಖಾಮುಖಿ ನೋಟವೇ ಮೈಮನಗಳನ್ನು ನಡುಗಿಸುತ್ತದೆ. ಮರದ ಎತ್ತರ, ಅದರ ಬೇರು ಎರಡೂ ಕಾಣಲಾರದ್ದು. ಆಕಾಶವನ್ನೇ ಸೀಳಿ ನುಗ್ಗಿ, ಪಾತಾಳ ಕೊರೆದು ಇಳಿದ ಈ ಮಹಾವೃಕ್ಷದ ದರ್ಶನ ಕವಿಗೆ ಹುಟ್ಟಿಸುವುದು ಬೆರಗು, ವಿನಯ, ಗೌರವಭಾವಗಳನ್ನು. ಆ ವಿನೀತ ನೆಲೆಯಲ್ಲಿ ಮನಸು ಆ ಅದ್ಭುತಕ್ಕೆ ಶರಣಾಗುತ್ತದೆ.

'ನಿನ್ನ ಎಲೆ ಎಲೆಗೆ
ಬೇರು ಬೇರಿಗೆ
ಕಾಂಡ ಕೊಂಬೆ ರೆಂಬೆಗೆ
ರೆಂಬೆಯ ಸೀಳಿಗೆ
ಶರಣು'.

ಈ ಜೀವವೃಕ್ಷವೇ ತನಗೂ ಶಕ್ತಿ ನೀಡಬೇಕೆಂದು ಮೊರೆ ಏಳುತ್ತದೆ. ಯುಗಯುಗಾಂತರಗಳ ಲೆಕ್ಕ ಸಿಗದ ಕಾಲದಿಂದ ಬೆಳೆದು ವಿಕಾಸವಾಗಿರುವ ಇಂತಹ ಜೀವವೃಕ್ಷದ ವೈಶಾಲ್ಯದ ಎದುರಲ್ಲಿ ಹೆಣ್ಣಾಗಿ, ಮಾನವಜೀವಿಯಾಗಿ ತನ್ನ ಜಾಗವೇನು? ಎಂಬ ತಳಮಳಕ್ಕೆ,

'ಓ ಹೆಣ್ಣೆ
ನಿನ್ನ ಜನ್ಮವೊಂದು
ಎಳೆ ಚಿಗುರೆಲೆಯ ತುದಿ
ಚಿಗುರ ತುದಿಗೆ
ಯುಗದ ಲೆಕ್ಕಾಚಾರ ದಕ್ಕೀತೆ'

ಹೀಗೆ ತಿಳಿವು ಮೂಡಿಸುತ್ತಾ ನಕ್ಕವರು ಯಾರೆಂಬ ಜಿಜ್ಞಾಸೆಯಲ್ಲಿ ಕವಿತೆ 'ಲಿಂಗತ್ವ'ದ ಅರ್ಥವನ್ನೂ ಪ್ರಶ್ನಿಸಿದಂತಿದೆ :

'ಎಂದು ನಕ್ಕವರಾರು
ಒಡೆಯ ಜಡೆಮಾದಿಯೆ
ಒಡತಿ ಜಡೆಮಾದನೆ
ಅವಳೆ ?
ಅವನೆ?
ಅವನವಳಲ್ಲದ ಮರವೆ?'



**ಜೀವ ಸಂಪಿಗೆ** (ಕವನ ಸಂಕಲನ)
ಲೇ: ದು. ಸರಸ್ವತಿ
ಅಭಿನವ ಪ್ರಕಾಶನ, ಬೆಂಗಳೂರು
ಮೊ.ಮು. : 2007
ಪುಟ : 80, ಬೆಲೆ : ರೂ. 40/-

*ಹೋರಾಟ, ಚಳವಳಿಗಳು ಅಥವ ಯಾವುದೇ ಬದ್ಧತೆಯೊಂದಿಗೆ ಸೃಜನಶೀಲತೆ ಸಾಗಿಬರಲಾರದು ಎಂಬ ಹೇಳಿಕೆಯ ಪೊಳ್ಳುತನಕ್ಕೆ ಉತ್ತರವಾಗುವಂಥ ಬರಹಗಾರ್ತಿ ದು. ಸರಸ್ವತಿ. ಇವರ ಕೃತಿಯ ಮೂಲಕ ಹೊಸ ತತ್ತ್ವಗಳು, ಒಳನೋಟಗಳನ್ನು ಕೊಡುವ ಪ್ರಯೋಗವೊಂದು ಇಲ್ಲಿದೆ. ಗಂಭೀರ ವಿಮರ್ಶೆಯ ಮೂಲಕವೇ ಸೃಜನಶೀಲತೆಯ ಒಳಹರಿವನ್ನು ಕಂಡರಿಸುವ ಡಾ. ಸುಮಿತ್ರಾಬಾಯಿ ಅವರ ಚಿಂತನೆಗಳು ಒಂದೆಡೆಯಾದರೆ, ನಮ್ಮ ನಡುವಿನ ಪ್ರಮುಖ ಕವಯಿತ್ರಿ ಪ್ರತಿಭಾ ಅವರು ಹೋರಾಟಗಾರ್ತಿಯೊಳಗಿನ ಕಲಾವಿದೆಯನ್ನು, ಅಕ್ಷರ ಹೊತ್ತು ತಂದಿರುವ ಸೃಜನಶೀಲತೆಯನ್ನು ಇಲ್ಲಿ ವಿಸ್ಮಯದಿಂದ ನೋಡಿದ್ದಾರೆ. ಈ ಹೊತ್ತು ಪುಸ್ತಕ ವಿಮರ್ಶೆಗಳು ಬೇಕಾಬಿಟ್ಟಿಯಾಗುತ್ತಿರುವ ಹಿನ್ನೆಲೆಯಲ್ಲಿ ಈ ಪ್ರಯೋಗ ಹೊಸ ಅರ್ಥ ಪಡೆದುಕೊಳ್ಳುತ್ತದೆ ಮತ್ತು ಹೊಸ ಓದಿಗೆ, ನಿಜಕ್ಕೆ ದಾರಿ ಮಾಡುತ್ತದೆ. – ಸಂ.*

ಜೀವಸತ್ವದ ಆಳದ ಶಕ್ತಿಯನ್ನು 'ಅವನು' / 'ಅವಳು' ಎಂದು ಕರೆಯಬಹುದೆ ಎಂಬ ಈ ಪ್ರಶ್ನೆ 'ಗರಗರನೆ ಸುತ್ತುವ ಸುಳಿ'. ಈ ನಿಜದ ಎದುರು ಮನಸ್ಸು ಬಳಲುತ್ತದೆ.

'ನಾ ಕಾದಾಡಲಾರೆ ನಿನ್ನೊಡನೆ
ನೀ
ಮಡಿಲಿಗೆಸೆದ ಹಿಡಿ ಬದುಕು ನಿನಗೆ ಮುಡಿಪು'

ಜೀವಜಗತ್ತಿನಲ್ಲಿನ ಬದುಕಿಗೇ ಬದುಕನ್ನು ಮುಡಿಪಿಡುವ ಈ ನಿರ್ಧಾರ ಇಂಥ ಬದುಕು ವರವೋ ಶಾಪವೋ ಎಂಬಂಥ ದ್ವಂದ್ವವನ್ನು ಮೀರಲು ನೆರವಾಗುವಂಥದು. ಆ ರೀತಿ ಮೀರಿನಿಂತ ಹೊಸ ಜಾಗದಲ್ಲಿ,

'ಹಿಡಿಯೊಳಗೆ
ಇಂಪುಂಟು
ತಂಪುಂಟು
ಕಂಪುಂಟು
ಕಾಪಿಡುವ ಕಾವುಂಟು
ಕಾದು ಸುಡುವ ಕಾರಿರುಳುಂಟು
ರಣಾಂಗಣವುಂಟು
ಮಸೆದ ಮಚ್ಚುಗಳುಂಟು'

ಎಂಬ ಅರಿವು ಮೂಡಿದೆ. ಹೀಗೆ ಜೀವತತ್ತ್ವದ ಒಟ್ಟು ಚರಿತ್ರೆಯಲ್ಲಿ ತನ್ನ ಬದುಕು ಕೇವಲ ಹಿಡಿಯಷ್ಟು. ಅದರಲ್ಲೂ ಇಷ್ಟೊದು ಒಳಿತು ಕೆಡುಕಿನ ಸಂಘರ್ಷಗಳೇ ತುಂಬಿಹೋಗಿರುವ ಅರಿವಿನೊಡನೆ ಕವನ ಕೊನೆಗೊಳ್ಳುತ್ತದೆ.

ಬದುಕಿನ ನೆಲೆಯಲ್ಲಿ ಸ್ತ್ರೀಯಾಗಿ ಪಡೆವ ಅಂಕಿತಗಳು ಹೆಂಡತಿ, ಪ್ರೇಯಸಿ, ಇಲ್ಲವೆ ಮಕ್ಕಳ ತಾಯಿಯದು. ಪರಂಪರಾಗತವಾಗಿ ಒಪ್ಪುತ್ತಾ ಹೋಗಿರುವ ಈ ಸಾಂಪ್ರದಾಯಿಕ ಅಂಕಿತವನ್ನೇ ಧಿಕ್ಕರಿಸಿ, ತನ್ನದೇ ಆದ ಸ್ವತಂತ್ರ ಅಸ್ಮಿತೆಯತ್ತ ಗಮನಸೆಳೆವ ಯತ್ನವೊಂದನ್ನ ಸರಸ್ವತಿಯವರ "ತಬ್ಬಲಿಗಳ ಜೋಗುಳ" ಕವನದಲ್ಲಿ ನೋಡಬಹುದು.

'ಬಾಗಿಲಿಲ್ಲ ಕಿಟಕಿ ಇಲ್ಲ, ಕಿಂಡಿ ಇಲ್ಲದ' ಅಂತರಂಗದ ಅಲೆಗಳೊಳಗೆ 'ಮುಳುಗಿ ಹೊತಿರುವುದೇನೋ?' ಎಂಬ ಜಿಜ್ಞಾಸೆಯಿಂದ ಕವನ ಶುರುವಾಗುತ್ತದೆ. ಬದುಕಿನ ಸುಂದರ ಹಾಗೂ ಕುರೂಪಿ ಅಂಶಗಳೆರಡಕ್ಕೂ ಅಂತರಂಗದ ಸ್ಪಂದನೆಗಳು ದಾಖಲಾಗುತ್ತವೆ. ತೂಗುವ ಉಯ್ಯಾಲೆ, ಚಿಮ್ಮುವ ಹರಯ, ಹಕ್ಕಿಹಾಡು, ಬೆಚ್ಚನೆಯ ಗೂಡು, ಬಟ್ಟಲ ಪ್ರೀತಿಯ ಸುಂದರ ಲೋಕ ಛಿದ್ರವಾಗುವ ಹಾಗೆ.

'ದಢಾರನೆ ಸಿಡಿಲು ಬಡಿದು
ಗರಬಿದ್ದು
ಗೋಡೆ ಕುಸಿದು
ಬಟಾ ಬಯಲಾಗಿ'



ಹೋದ ಸ್ಥಿತಿ ಉಸಿರುಗಟ್ಟಿಸಿದೆ. ಕತ್ತಲು-ಸಿಡಿಲು ಮಿಂಚುಗಳ ಆರ್ಭಟ - ಮತ್ತೆ ಕತ್ತಲನ್ನೇ ಕವಿಸುವ ಈ ಆಟ ಬೇಗ ಮುಗಿಯಬಾರದೇ ಎಂಬ ದಿಗಿಲು ತವಕಗಳಲ್ಲಿ

'ಆಟಬೇಡ
ಹೊಂಚಿನ ಬೇಟೆ ಬೇಡ'

ಎಂದು ತೆಪ್ಪನೆ ಕೂರುತ್ತದೆ ನವಿಲು : 'ಗಗನದೊಡಲು ಗುಡುಗು ಸಿಡಿಲು'ಗಳಿಗೆ ಬಹಳ ಹರುಷ ತಳೆದು ಮೋಡ ಕರೆದಾಗ ಹಿಗ್ಗಿ ಗರಿಗೆದರುವ ಪರಂಪರಾಗತ ನವಿಲಿನ ಪ್ರತೀಕಕ್ಕೆ ಇಲ್ಲಿ ಸರಸ್ವತಿ ಸೃಷ್ಟಿಸಿರುವ ಚಿತ್ರದ ವೈರುಧ್ಯ ಗಮನಾರ್ಹ. ಈಗ ನವಿಲು,

'ಗರಿ ಬಿಚ್ಚೆನೆಂದು
ಹೆಜ್ಜೆ ಹಾಕೆನೆಂದು
ರಂಗದ ಅಂತ ತಾನೆಂದು
ಕವುಚಿ ತೂಕಡಿಸಿತು.'

ರಂಗದ ಕುಣಿತಕ್ಕೆ ಅಂತ್ಯಹಾಡಿ, ರೆಕ್ಕೆ ಮುದುಡಿ ಕುಳಿತ ನವಿಲಿನ ಸ್ಥಿತಿ ಮನಸ್ಸಿನ ಧ್ಯಾನಸ್ಥ ಸ್ಥಿತಿಯೂ ಹೌದು. ಈ ಸ್ಥಿತಿಯೊಳಗೆ ಒಬ್ಬ ಹೆಣ್ಣು ಕಾಣಿಸಿಕೊಳ್ಳುತ್ತಾಳೆ. ಅವಳು 'ಮಿಂಚುಬಳ್ಳಿಗಳ ಚಕ್ಕನೆ ಹಿಡಿದು' ತಲೆಗೆ ಸಿಂಬಿಯಾಗಿಸಿಕೊಂಡು, ಮಣ್ಣಗಡಿಗೆ ತಲೆಮೇಲೆ ಹೊತ್ತು, ಅದರಲ್ಲಿ ಮಳೆ ನೀರನ್ನು ತುಂಬಿಕೊಂಡು 'ಮೊಳಕೆಗೆ ಹನಿಸ ಹೊರಟ'ವಳು. ಆ ತಾಯೆಂಬ ಹೆಣ್ಣ? ಯಾರೆಂದು ಕೇಳಿದರೆ, ಅವಳು ಕೊಡುವ ಉತ್ತರ,

'ನಾ ಗಂಡನ ಹೆಂಡತಿಯಲ್ಲ
ಪ್ರಿಯನ ಪ್ರೇಯಸಿಯಲ್ಲ
ಬಸಿರಿನ ತಾಯಿಯಲ್ಲ
ಜೀವಕ್ಕೆ ಜೀವ
ತಬ್ಬಲಿಗಳ ಜೋಗುಳ'

ಪತ್ನಿ, ಪ್ರೇಯಸಿ, ಮಾತೆಯರ ಗತಾನುಗತಿಕವಾದ ಹೆಣ್ಣಿನ ಅಂಕಿತಗಳನ್ನು ಸ್ಪಷ್ಟವಾಗಿ ನಿರಾಕರಿಸುತ್ತ, ಜಗದ ಎಲ್ಲ ತಬ್ಬಲಿಗಳಿಗೂ ಜೋಗುಳವಾಗಬಲ್ಲ ಜೀವಕ್ಕೆ ಜೀವವಾಗು – 'ತಾಯಿ' ಶಬ್ದದ ಅತ್ಯಂತ ವಿಶಾಲಾರ್ಥದಲ್ಲಿ ತನ್ನದೇ ಸ್ವತಂತ್ರ ಅಸ್ಮಿತೆಯನ್ನು ಗುರುತಿಸುವ ಈ ಭಾವವು ಮಹಿಳಾಕಾವ್ಯದಲ್ಲೇ ಅಪರೂಪದ್ದೆನ್ನಬಹುದು. ಇದು ಲಿಂಗತ್ವದ ಸಂಘರ್ಷದ ಜಾಗದಿಂದ ಸರಿದು ತನ್ನ ಹೆಣ್ಣುತನದ ಜೀವತ್ವವನ್ನು ದೃಢವಾಗಿ ಒಪ್ಪಿ, ಬದುಕಿನ ಒಟ್ಟು ಗತಿಗೆ ತಾನೇ ಶಕ್ತಿಯನ್ನು ನೀಡಬಲ್ಲ ಆತ್ಮವಿಶ್ವಾಸದ ಜಾಗವಾಗಿರುವುದನ್ನು ಗಮನಿಸಬೇಕು.

ಸರಸ್ವತಿ ತುಂಬ ಅಂತರ್ಮುಖಿಯಾದ ನೆಲೆಯಲ್ಲಿ ಬದುಕಿನ ಎಲ್ಲ ಮಾರ್ದವತೆ ಹಾಗೂ ಕ್ರೂರತೆಗಳ ಅನುಭವಗಳಿಗೆ ತನ್ನ ಮನದ ಸ್ಪಂದನ, ತಳಮಳಗಳನ್ನೇ ತುಂಬು ಪ್ರಾಮಾಣಿಕತೆಯಿಂದ ದಾಖಲಿಸುವ 'ಆತ್ಮನಿಷ್ಠ' ಕವಿಯಾದರೂ ರೂಢಿಗತ ಪ್ರಕ್ರಿಯೆಗಳನ್ನ, ನಂಬಿಕೆಗಳನ್ನ ತಮ್ಮದೇ ಆದ ರೀತಿಯಲ್ಲಿ ಮುರಿಯುವಂಥ ಹೊಸ ಚಿಂತನೆಗೆ ಪ್ರೇರಿಸುವಂಥ ರೂಪಕಗಳನ್ನು ಚೆಲುವಾಗಿ, ಆದರೆ ಸರಳ, ಸಹಜತೆಯಲ್ಲಿ ಕಟ್ಟಬಲ್ಲರು. 'ಮಿನುಗು' ಎಂಬ ಒಂದು ಕವನದ ಸಾಲುಗಳಲ್ಲಿ ರೂಢಿಗತವಾದ ಕಣ್ಣು-ತಾರೆಗಳ ಹೋಲಿಕೆ ವಿಚಾರವನ್ನೇ ಬಳಸಿಯೂ ಹೊಸ ಬೆಡಗೊಂದನ್ನು ಕಾಣಬಹುದು :

'ಸೂರ್ಯ
ಕಣ್ಣಮಣಿಗಳ ಮಿಣುಕನ್ನು
ಕದ್ದು
ಒಂದ ಹತ್ತಾಗಿಸಿ
ಹತ್ತನೂರಾಗಿಸಿ
ಎಣಿಸಲಾರದಾಗಿಸಿ
ಮುಗಿಲ ಮಿನುಗಿಸಿದನೆ?'
'ಅವ್ವ
ಸೂರ್ಯನ ಬೇಡಿ
ಎಣಿಸಲಾಗದ ಮಿನುಗುಗಳ
ಬಿಡಿಸಿತಂದು
ಕಣ್ಣಮಣಿಗಳ ಮಿಣುಕಿಸಿದಳೆ?'

'ಆಮೆ ಆಗಿದ್ದರೆ' ಎಂಬ ಕವನದ ಈ ಸಾಲುಗಳು ಹೇಗೆ 'ಆಮೆ-ಮೊಲದ' ರೂಢಿಗತ ಚಿತ್ರಕ್ಕೆ ಕೊಕ್ ಕೊಡುತ್ತವೆಂಬುದನ್ನು ನೋಡಿ:

'ಮೊಲದ ವೇಗ
ಮೈಲುಗಳ ಎಣಿಸಿ
ಕಳೆದ ದಾರಿಯ ಅಳತೆ ಮಾಡಿತು'
'ಹಚ್ಚೆಯಂತೆ
ಹೆಜ್ಜೆಗಳಟ್ಟ
ಆಮೆನಡಿಗೆ
ಸವೆಸಿದ ದಾರಿಯ
ದೂರ ಆಯಿತು'

ಸುಪರಿಚಿತ ಎಂಬಂತೆ ತೋರುವ ಪ್ರತೀಕಗಳ ಮೂಲಕವೆ ಅಪರಿಚಿತ ಅರ್ಥಗಳನ್ನು ಹಿಡಿದುಕೊಡಬಲ್ಲ ಈ ಕವಿಯ ಪ್ರತಿಭೆಗೆ ಸಾಕ್ಷಿ 'ಪಾಪದೆಣ್ಣೆಯದೀಪ' ಎಂಬ ಕವನ. ಏನನ್ನೂ ವಾಚ್ಯವಾಗಿಸದೆ, ಎಲ್ಲವನ್ನೂ ಧ್ವನಿಸುವ ಅಪರೂಪದ ಕಲಾತ್ಮಕತೆ ಸರಳತೆಗಳೆರಡೂ ತುಂಬಿಕೊಂಡ ಈ ಕವನ ಚಿಕ್ಕದೂ ಸುಂದರವೂ ಆಗಿದೆ :

ಕೊರಗು
ಎದೆಯ ಮೇಲೊರಗಿ
ಬಡಿತದ ಜೋಗುಳಕೆ
ಕರಗುವ ಹೊತ್ತು
ಕೊರತೆ
ಒಡಲ ವರತೆಯಲಿ
ಮಿಂದು ನೀಗುವ ಹೊತ್ತು
ಎರಗುವುದೆಲ್ಲ ಬೆರಗಾಗಿ
ಕಾಡವುದೆಲ್ಲ ಇಂಗಿಹೋಗಿ
ಪಾಪದೆಣ್ಣೆಯಲ್ಲಿ
ಉರಿ
ದೀಪವಾಗಿ
ಹನಿದ ಬೆಳಕು ಹರಿಯುತ್ತಿತ್ತು.
ಇಳೆ ಅಲುಕಿಲ್ಲದೆ
ಎದ್ದು ಮೈಮುರಿದಳು.

'ಜೀವಸಂಪಿಗೆ'ಯಲ್ಲಿ ಇಪ್ಪತ್ತಾರು ಕವಿತೆಗಳಿವೆ. ಎಲ್ಲದರಲ್ಲೂ ಅಲ್ಲಲ್ಲಿ ಮನಸ್ಸು ಸೆರೆಗೊಳ್ಳಬಹುದು. ಅಷ್ಟಿಷ್ಟು ಮಿನುಗೂ ಇದೆ. ಅವೆಲ್ಲವೂ ಸೇರಿ ಜೀವಸಂಪಿಗೆ ಗೊಂಚಲು ಗೊಂಚಲಾಗಿ ಅರಳಿ ಪರಿಮಳಿಸಲಿ. ❑

*ಮಹಿಳೆಯರಿಗೆ ಪುರುಷನೊಂದಿಗೆ ಸಮಾನತೆ ಸಮಗೌರವವಿರುವಂಥ ಸಮಾಜ, ಸಂಸ್ಕೃತಿ ನಿರ್ಮಾಣ ಆಗುವವರೆಗೆ ಮಹಿಳೆಯರಿಗೆ ಕಾನೂನಿನ ಮೂಲಕ ದೊರೆಯುವ 'ನ್ಯಾಯ'ವು ನ್ಯಾಯಕ್ಕಿಂತ ಹೆಚ್ಚಾಗಿ 'ಕರುಣೆ' ಎನಿಸಿಕೊಳ್ಳುತ್ತದೆ. ಮಹಿಳೆಯರಿಗೆ ಕರುಣೆಯ ಅಗತ್ಯವಿಲ್ಲ; ನ್ಯಾಯದ ಅಗತ್ಯವಿದೆ.... ಸಮಾನತೆ, ಸಮಗೌರವ ದೊರೆಯುವಂಥ ಕಾಲ ಬಂದಾಗ ಮಹಿಳೆಯ ಹಿತರಕ್ಷಣೆಯ ಕಾನೂನು-ಕಾನೂನುಗಳು ಎಂದು ಮಹಿಳೆಯರಿಗೇ ಪ್ರತ್ಯೇಕವಾಗಿ ಇರಬೇಕಾದ ಪರಿಸ್ಥಿತಿ ಇರುವುದಿಲ್ಲ. ಒಟ್ಟು ಸಮಾಜದ, ಸಂಸ್ಕೃತಿಯ ಪರಿಕಲ್ಪನೆ ಮತ್ತು ಕ್ಷೇಮದ ಅಗತ್ಯದ ಭಾಗವಾಗಿಯೇ ಕಾನೂನು-ಕಾನೂನುಗಳು ಇರುವಂತಾಗುತ್ತದೆ. ಇಂಥ ಕಾಲಕ್ಕಾಗಿ ಮಹಿಳೆಯರು ಕಾಯುತ್ತ ಕುಳಿತರೆ ಅದು ಬರುವುದೇ ಇಲ್ಲ; ಅದು ಪ್ರಜ್ಞಾವಂತ ಹೋರಾಟ ನಡೆಸಿಯೇ ಪಡೆಯಬಹುದಾದದ್ದು.*

**-ಮೀರಾ ನಾಯಕ,** (ಮಹಿಳಾ ಅಧ್ಯಯನ, ಕ.ವಿ.ವಿ., ಹಂಪಿ)

# ದು ಸರಸ್ವತಿ ಸ್ವತಃ ಒಂದು ನಡೆದಾಡುವ ಕವಿತೆ

**ಪ್ರತಿಭಾ ನಂದಕುಮಾರ್**

ಯಾವುದೋ ಲೋಕದಿಂದ ಬಂದು ಇಲ್ಲಿ ಆಡಿಕೊಂಡಿರುವ ಹಕ್ಕಿ ಅವಳು. ಯಾವಾಗ ಬೇಕಾದರೂ ಇದು ನನ್ನದಲ್ಲ ಅಂತ ಇದನ್ನೆಲ್ಲ ಬಿಟ್ಟು ಹಾರಿಹೋಗಬಹುದಾದವಳು. ಆದರೂ ಇಲ್ಲಿ ಇರುವಾಗ ನನ್ನದೇ ಅನ್ನುವ ಹಾಗೆ ಎಲ್ಲವನ್ನೂ ಬಾಚಿ ತಬ್ಬಿಕೊಂಡು ಬದುಕುತ್ತಿರುವವಳು. ಎಲ್ಲವನ್ನೂ ಬರೀ ಹೃದಯದ ಮೂಲಕವೇ ಅರ್ಥಮಾಡಿಕೊಳ್ಳುವುದು ಅವಳಿಗೆ ಸಹಜಗುಣ. ಅದಕ್ಕೇ ಅವಳ ಯಾವ ಹೋರಾಟ, ಆಕ್ಟಿವಿಸಂ, ನಾಟಕ, ಪದ್ಯ, ಗದ್ಯ, ಲೇಖನ, ಭಾಷಣ ಯಾವುದೂ ಕೇವಲ ಅಷ್ಟೇ ಆಗದೇ ಅದನ್ನೂ ಮೀರಿ ಬದುಕಿನ ಬಗ್ಗೆಯ ಭಾಷ್ಯ ಆಗುವುದು. ಸುಮತಿ ಹೇಳುತ್ತಿದ್ದಳು : ಸರಸ್ವತಿಯ ಒಂದು ಕಥೆಯಲ್ಲಿ "ಪೌರ ಕಾರ್ಮಿಕಳೊಬ್ಬಳಿಗೆ ಮಗುವಾದಾಗ ಅದಕ್ಕೆ ಎರಡು ಬೆರಳುಗಳಿಲ್ಲ ಅಂತ ಎಲ್ಲರೂ ಸಂಕಟ ಪಡುತ್ತಿದ್ದಾಗ ಅದರ ತಾಯಿ 'ಸದ್ಯ, ನನ್ನ ಮಗು ಪೊರಕೆ ಹಿಡಕೊಂಡು ಗುಡಿಸುವ ಬದಲು ಓದಿ ಬರೆದು ಬೇರೆ ಏನಾದರೂ ಆಗಬಹುದಲ್ಲ ಅಂತ ಅಂದುಕೊಳ್ಳುವ ಒಳನೋಟವನ್ನು ಸರಸ್ವತಿ ಮಾತ್ರ ತರಲು ಸಾಧ್ಯ" ಅಂತ.

ಹಾಗೆಂದು ಸರಸ್ವತಿ ಯಾವತ್ತೂ ಅವಳ ಯಾವ ಬರಹದಲ್ಲೂ ಬರೀ ಸೆಂಟಿಮೆಂಟ್ ಮಾತ್ರ ದಾಖಲಿಸುತ್ತಾಳೆ ಅಂತಲ್ಲ. ಅವಳು ಸಕಲವನ್ನೂ ಪೊಲಿಟಿಕಲ್ ಆಗಿಯೂ ಜೊತೆಗೇ ಹೃದಯದಿಂದ ನೋಡಿಯೂ ಎಕ್ಸ್ಟೆಂಡ್ ಮಾಡುವ ರೀತಿ ತೀರಾ ಅಪರೂಪದ ಗುಣ. ಎಷ್ಟೋ ದೊಡ್ಡ ಸಾಹಿತಿಗಳಿಗೂ ಅದು ಸಾಧ್ಯವಾಗಿಲ್ಲ. ಅವಳಿಗೆ ಯಾವುದೂ ಬೇರೆ ಬೇರೆಯಲ್ಲ. ಎಲ್ಲವೂ ಒಂದಕ್ಕೊಂದು ತಳಕು ಹಾಕಿಕೊಂಡಿವೆ. ಆಕ್ಟಿವಿಸಂ, ಸಾಹಿತ್ಯ, ಸಂಬಂಧಗಳು ಎಲ್ಲವೂ ಅವಳ ವ್ಯಕ್ತಿತ್ವದ ಹಾಸುಹೊಕ್ಕುಗಳು. ಅದಕ್ಕೇ ಅವಳನ್ನು ಅರಿಯಲು ಬಹಳ ತಿಣುಕಾಡುವುದು ಕೂಡಾ ಬೇಕಾಗಿಲ್ಲ. ಬಹಳ ಸುಲಭ ಅವಳನ್ನು ಅರ್ಥಮಾಡಿಕೊಳ್ಳುವುದು. ಶುದ್ಧ ಮನಸ್ಸಿನಿಂದ ಯಾವುದನ್ನಾದರೂ ಗ್ರಹಿಸಬಲ್ಲಿರಾದರೆ, ಸ್ಫಟಿಕದ ನೋಟದಿಂದ ನೋಡಬಲ್ಲಿರಾದರೆ ಸರಸ್ವತಿ ನಿಮಗೆ ಅರ್ಥವಾಗುತ್ತಾಳೆ. ಇದನ್ನೇ ಎಚ್.ಎಸ್. ರಾಘವೇಂದ್ರ ರಾವ್ 'ಜೀವ ಸಂಪಿಗೆ' ಯ ಮುನ್ನುಡಿಯಲ್ಲಿ " ಸರಸ್ವತಿಯ ಬರವಣಿಗೆಯ ಬಗ್ಗೆ ಬರೆಯುವುದೆಂದರೆ ಅವರ ವ್ಯಕ್ತಿತ್ವದ ಕುರಿತು ಬರೆಯುವಂತೆಯೇ ಆಗಿದೆ" ಅಂತ ಹೇಳಿದ್ದಾರೆ.

ಸ್ವಲ್ಪ ಹಿಂದೆ ಪಾರ್ವತಿಬವುಲ್ ಅದೇ ತಾನೇ ಕರುಳ ತುಣುಕೊಂದನ್ನು ಹರಿದು ಬಡಿಸಿ ತಿನ್ನು ಅಂದ ಹಾಗೆ 'ಬಸಿರ ಹಾಡು' ಹಾಡಿದ್ದನ್ನು ಕೇಳಿದ ಉನ್ಮಾದದಲ್ಲಿ ಥಟ್ಟನೆ ನನಗೆ ಸರಸ್ವತಿ ನೆನಪಾಯಿತು. ಇಡಾ ಪಿಂಗಳ ನಾಡಿ ಅಂತೆಲ್ಲಾ ಪಾರ್ವತಿ ಮಾತಾಡುತ್ತಿದ್ದಾಗ ಅವಳನ್ನೂ ಎಷ್ಟು ಜನ ಅರ್ಥ ಮಾಡಿಕೊಳ್ಳುತ್ತಾರೆ ಅನ್ನಿಸಿತ್ತು. ಆದರೂ ಅವಳು ಅನೇಕರನ್ನು ತಟ್ಟಿದ್ದಳು, ಅವಳ ಹಾಡಿನಲ್ಲಿ ಮುಳುಗುವುದು ಅನೇಕರಿಗೆ ಸಾಧ್ಯವಾಗಿತ್ತು.

ಸರಸ್ವತಿಯನ್ನು ಅರ್ಥ ಮಾಡಿಕೊಳ್ಳುವುದು ಸುಲಭವೂ ಅಲ್ಲ, ಅದಕ್ಕೆ ಬೇರೆ ರೀತಿಯ ವೇವ್‌ಲೆಂತ್ ಬೇಕಾಗುತ್ತದೆ. ಆ ರೀತಿಯ ಸಂವೇದನೆ ಇಲ್ಲದಿರುವವರಿಗೆ ಏನು ಮಾಡಿದರೂ ಸರಸ್ವತಿ ಅರ್ಥ ವಾಗುವುದಿಲ್ಲ. ಅಷ್ಟೇ ಅಲ್ಲ, ಅಂತಹವರು ಸರಸ್ವತಿಯನ್ನು ಅಪಾರ್ಥ ಮಾಡಿಕೊಳ್ಳುವುದೇ ಹೆಚ್ಚು.

ಒಂದು ಸಣ್ಣ ಉದಾಹರಣೆ ಕೊಡಬೇಕೆಂದರೆ, ಅವಳು ಭಾಷೆಯಲ್ಲಿ ಮಾಡುವ ಪ್ರಯೋಗಗಳು. ಅದು ಎಷ್ಟು ಸೂಕ್ಷ್ಮವೂ, ಎಷ್ಟು ಹೊಸತಾದದ್ದೂ ಆಗಿರುತ್ತದೆ ಅಂದರೆ ಅದನ್ನು ಗುರುತಿಸಲು, ಅದೊಂದು ಸ್ಟೇಟ್‌ಮೆಂಟ್ ಅಂತ ತಿಳಿದುಕೊಳ್ಳಲು ಹೆಚ್ಚಿನ ಜನರಿಗೆ ಸಾಮರ್ಥ್ಯವೇ ಇಲ್ಲ. ಬೇರೆ ಬೇರೆ ಕನ್ನಡಗಳ ಎಳೆಗಳನ್ನು ತೆಗೆದುಕೊಂಡು ಅವಳು ಬಳಸುವ ರೀತಿ ಪ್ರಜ್ಞಾಪೂರ್ವಕವೂ ವಿಶಿಷ್ಟವೂ ಆಗಿರುತ್ತದೆ. ದೇವನೂರ ಮಹಾದೇವರ ಅನಂತರ ಭಾಷೆಯನ್ನು ಅದೇ ತರಹ ದುಡಿಸಿಕೊಂಡ ಸಾಹಿತಿ ಸರಸ್ವತಿ. ಅವಳು ಹೆಂಗಸಿನ ಭಾಷೆಯನ್ನು ಬಳಸುತ್ತಾಳೆ ಅನ್ನುವುದು ಇನ್ನೊಂದು ವೈಶಿಷ್ಟ್ಯ.

ಭಾಷೆಯ ವಿಷಯದಲ್ಲಿ ಬೇರೆಯವರು ಯಾವುದನ್ನು ದೌರ್ಬಲ್ಯ ಅಂದುಕೊಳ್ಳುತ್ತಾರೋ ಅದನ್ನು ಶಕ್ತಿಯಾಗಿ ಪರಿವರ್ತಿಸುವ ಸಾಮರ್ಥ್ಯ ಸರಸ್ವತಿಗಿದೆ. ಬೇರೆಯವರು ಅಂತಹ ಭಾಷೆಯನ್ನು ಬಳಸಿಲ್ಲ ಅಂತಲ್ಲ. ಸ್ವಲ್ಪ ಹಿಂದೆ ದೀಪಾವಳಿ ಕಥಾಸ್ಪರ್ಧೆಯಲ್ಲಿ ಬಹುಮಾನ ಪಡೆಯ ಬೇಕಾದರೆ ದಲಿತರ ಭಾಷೆಯಲ್ಲಿ ಬರೆದರೆ ಮಾತ್ರ ಅಂತ ಒಂದು ಜೋಕ್ ಓಡಾಡುತ್ತಿತ್ತು. ಅಷ್ಟರ ಮಟ್ಟಿಗೆ ಅದೊಂದು ಪೊಲಿಟಿಕಲ್ ಸ್ಟೇಟ್‌ಮೆಂಟ್ ಆಗಿತ್ತು. ಆದರೆ ಸರಸ್ವತಿ ಶಿಷ್ಟ ಕನ್ನಡ, ದಲಿತರ ಕನ್ನಡ, ರೇಡಿಯೋಗಳಲ್ಲಿ ಬಳಕೆಗೆ ಬಂದಿರುವ ಕಂಗ್ಲಿಷ್ ಕನ್ನಡ, ಬೆಂಗಳೂರು ವಿಚಿತ್ರ ಕನ್ನಡದ ಜೊತೆಗೆ ಇಂಗ್ಲಿಷ್ ಭಾಷೆಯನ್ನೂ ಅವುಗಳ ಸಾಂಸ್ಕೃತಿಕ ಹಿನ್ನೆಲೆಗಳ ಸಹಿತ ಪ್ರಜ್ಞಾಪೂರ್ವಕವಾಗಿ ಬಳಸಬಲ್ಲಳು. ಪೌರಕಾರ್ಮಿಕರ ಜೊತೆ ವ್ಯವಹರಿಸುವಾಗ ಅವರದೇ ಕನ್ನಡ (ತೆಲುಗನ್ನಡ) ಬಳಸಿ, ಮರುಕ್ಷಣ ಒಳಗೆ ಅಧಿಕಾರಿಗಳ ಜೊತೆ ಮಾತಾಡುತ್ತಾ ಅಪ್ಪಟ ಇಂಗ್ಲಿಷ್ ಬಳಸುವ ಜಾಣ್ಮೆ ಅವಳಿಗಿದೆ. ಅದೇ ವೇಳೆಯಲ್ಲಿ ಅತೀ ಅಪ್ಪಟ ಕಾವ್ಯಭಾಷೆಯನ್ನೂ ರೂಢಿಸಿಕೊಂಡ ಕುಶಲತೆಯಿದೆ. ಇದನ್ನು ಗುರುತಿಸಲಾಗದಿದ್ದರೆ ಸರಸ್ವತಿಯ ಬರಹ ಅರ್ಥವಾಗುವುದಿಲ್ಲ. ಯಾರು ತನ್ನ ಮಗುವನ್ನು ಸಹಜವಾಗಿ 'ಕಂದಾ' ಅಂತ ಕರೆಯುವುದಿಲ್ಲವೋ ಅಂತಹವರಿಗೆ ಬೇರೆಯವರು ಹಾಗೆ ಕರೆಯುವುದು ನಾಟಕೀಯ ಅನ್ನಿಸಿದಂತೆ, ಕನ್ನಡದಲ್ಲಿ ಸದ್ಯದ ಸಾಹಿತ್ಯ ಸಂದರ್ಭದಲ್ಲಿ ಸಾಹಿತ್ಯಕ್ಕಿಂತ ಇತರ ವಿಷಯಗಳಿಗೇ ಹೆಚ್ಚು ಒತ್ತು ಕೊಡುತ್ತಿರುವುದರಿಂದ ಸರಸ್ವತಿಯ ಭಾಷಾಪ್ರಯೋಗ ಕೇವಲ ಪೊಲಿಟಿಕಲ್ ಸ್ಟೇಟ್‌ಮೆಂಟ್ ಮಟ್ಟದಲ್ಲೇ ಉಳಿದುಬಿಡುತ್ತದೆಯೇ ಹೊರತು ಅದನ್ನೂ ಮೀರಿ ಅದು ನವಿಲುಂಜವ ಹಿಡಿಯುವ ಏಕೈಕ ಮಾತು ಅಂತ ಗೊತ್ತಾಗುವುದಿಲ್ಲ.

ಯಾವುದೇ ಕವಿಯನ್ನು ಓದುವಾಗ ಅದಕ್ಕೊಂದು ಸಿದ್ಧತೆ ಬೇಕಾಗುತ್ತದೆ. ಇಂಥದ್ದೇ ಅಂತಲ್ಲ, ಕನಿಷ್ಠ ಪಕ್ಷ ಕವನ ಓದುವ ಮನಸ್ಥಿತಿಗೆ ಬರುವಷ್ಟಾದರೂ ಸಿದ್ಧತೆ ಬೇಕಾಗುತ್ತದೆ. ಕವಿ ಯಾವಸ್ಥಿತಿಯಲ್ಲಿ ಬರೆದಿದ್ದಾಳೆ, ಅವಳಿಗೆ ಹೇಳಬೇಕು ಅನ್ನಿಸಿದ ಅಂಶ ಯಾವುದು, ಅವಳನ್ನು ಕಾಡಿದ, ಕೆಣಕಿದ, ಸಂತೋಷ ಕೊಟ್ಟ ಭಾವನೆ ಯಾವುದು ಅಂತ ತಿಳಿಯುವಷ್ಟಾದರೂ ಕುತೂಹಲ ಇರಬೇಕಾಗುತ್ತದೆ. "ಅದೇನು ತಂದಿದ್ದೀಯಾ ತೋರಿಸಮ್ಮಿ, ನೋಡಾಮಾ ನಿನ್ ಗಂಟ್ನ" ಅಂತ ನಿಗುರಿ ನಿಂತವರ ಮುಂದೆ ಕವನ ಬಾಗದು. ಅದರಲ್ಲೂ ಕವನದ ಭಾಷೆ ಹೀಗಿರಬೇಕು, ಪದಪುಂಜ ಹೀಗಿರಬೇಕು, ಸಾಲು ಹೀಗೇ ಹೆಣೆದಿರಬೇಕು, ಜೀವನಾನುಭವ ತೋರಿಕೆಯಾಗಿ ಬರದೇ, ಕೃತಕ ವಾಗಿರದೇ ಇರಬೇಕಾದರೆ ಹೀಗೀಗೇ ಹೇಳಬೇಕು ಅಂತ ಪೂರ್ವ ನಿರ್ಧಾರಿತ 'ಸೇರು'ಗಳನ್ನು ಇಟ್ಟುಕೊಂಡು ಹೊರಟರೆ ನಿಮಗೆ ಕವನ ವಿರಲಿ, ಪುಸ್ತಕದ ಕವರೂ ದಕ್ಕುವುದಿಲ್ಲ. ನಮ್ಮ ನಡುವಿನ ಸಹಜ ಕವಿಯೊಬ್ಬಳ ಸಂವೇದನೆಯ ಬಗ್ಗೆ ತಿಳಿಯಬೇಕಾದರೆ ಅದಕ್ಕಿಂತ ಹೆಚ್ಚಿನ ಗಾಢತೆ ಬೇಕು.

ಸರಸ್ವತಿ ಮೊಟ್ಟ ಮೊದಲು ನನ್ನೊಳಗೆ ಬಂದಿದ್ದು **"ಹೆಣೆದರೆ ಜೇಡನಂತೆ"** ಕವನದ ಮೂಲಕ. ಅದು ನನ್ನ ಮಟ್ಟಿಗೆ ಪ್ರತಿಯೊಬ್ಬ ಕವಿಗೂ ಇರುವ ಲ್ಯಾಂಡ್‌ಮಾರ್ಕ್ ಸಾಲಿನಂತೆ. ಅದು ಬರಿ ಕವನವಾಗಿಯಲ್ಲ, ಬದುಕಿನ ಬಗ್ಗೆ ಬರೆದ ಭಾಷ್ಯವಾಗಿ ನನ್ನನ್ನು ಉದ್ದಕ್ಕೂ ಕಾಪಾಡಿದೆ. ಎಂತೆಂತಹ ಸಂದರ್ಭಗಳಲ್ಲಿ ನಾನು ಅದರ "...ಹೀಗೆ ಕಿತ್ತರೇ ಹಾಗೆ ಸರಸರ ಹೆಣೆಯಬೇಕು" ಅನ್ನುವುದನ್ನು ಅನ್ವಯಿಸಿಕೊಂಡು ಸ್ಥೈರ್ಯ ತಂದುಕೊಂಡಿದ್ದೇನೆ. ಅದೊಂದು ಸಾರ್ಥಕ ಮೆಟಫ಼ರ್. ಹಿಂದೆಯೂ ಬೇಕಾದಷ್ಟು ಕವಿಗಳು ಜೇಡ ಬಲೆಹೆಣೆಯುವುದನ್ನು ರೂಪಕವಾಗಿ ಬಳಸಿದ್ದಾರೆ. ಒಂದು ರೀತಿಯಲ್ಲಿ ಅದೊಂದು ಕ್ಲಾಸಿಕ್ ಉಪಮೆ. ಶಾಸ್ತ್ರೀಯ ಕಾವ್ಯಗಳಲ್ಲಿಯೂ ಜೇಡನ ಉಪಮೆ ಬೇಕಾದ ಹಾಗೆ ಸಿಗುತ್ತದೆ. ಆದರೂ ಸರಸ್ವತಿ ಆ ಹಳೆಯ ಬಳಕೆಯನ್ನೇ ಎತ್ತಿಕೊಂಡು ತನ್ನದಾಗಿಸಿಕೊಂಡು ಹೊಸದು ಮಾಡಿ ಬಳಸಿದ ರೀತಿ ಅದ್ಭುತ!

**"ಜೀವ ಸಂಪಿಗೆ"** ಸರಸ್ವತಿಯ ಎರಡನೇ ಸಂಕಲನ. ಇದರಲ್ಲಿ ಅವಳು ಬರೆದ "ತಲೆ ಬಾಗಿ ಶರಣು" ಅನ್ನುವ ಅರಿಕೆಯ ನಾಕು ಸಾಲುಗಳಲ್ಲಿ ಅವಳ ಕವಿ ಮನಸ್ಸು ನಿಚ್ಚಳವಾಗಿ ತೋರಿಕೊಳ್ಳುತ್ತದೆ. ಯಾವ ಕವಿಯೂ ಶ್ರೇಷ್ಠ ಕವನ ಬರೆಯಬೇಕು, ವಿಮರ್ಶಕರು ಶಭಾಶ್ ಅನ್ನುವ ಕವನ ಬರೆಯಬೇಕು ಅಂತ ಬರೆಯುವುದಿಲ್ಲ. ಸರಸ್ವತಿಯ ನವಿಲುಂಜ ಯಾವ ಯಾವ ಮಳೆಯಲ್ಲಿ ಹೇಗೆ ಹೇಗೆ ಆಡುವುದೋ ಅವಳಿಗೇ ಗೊತ್ತಿಲ್ಲ. ಆದರೆ ಅದು ಬಂದು ಅವಳೆದುರು ಆಡಿದಾಗ ಮಾತ್ರ ಸರಸ್ವತಿಯ "ಆ ಬೆರಗಿನ ಬಣ್ಣಗಳೊಳಗೆ, ಮಳೆ ಬೆಳಕ ಜಾಡು ಹಿಡಿವ ಜಾಣ್ಮೆಯೊಳಗೆ ಇಲ್ಲವಾಗಲು ಕಾತರಿಸಿ ಕಾಯುವುದು, ಈ ಜಗದ ಜೀವನವನ್ನು ನಿಸೂರಾಗಿ ನೀಗಿಸಿ ಬದುಕ ಧನ್ಯವಾಗಿಸಿ ಬಿಡಬಹುದು" ಎನ್ನುವ ಹಂಬಲ ಇದೆಯಲ್ಲಾ ಅದು, ಅದನ್ನು ನಾವು ಕಾಪಾಡಬೇಕು.

ನವಿಲು "ರಂಗದ ಅಂತ ತಾನೆಂದು ಕವುಚಿ ತೂಕಡಿಸಿತು", "ನಿದ್ದೆ ಹತ್ತಿ ಹಗುರು ಕನಸು ಬೀಳುವುದುಂಟೇ?", "ಹೆಣಿಗೆ ನಿಲ್ಲದು ಹಣಾಹಣಿ ಮುಗಿಯದು", "ಕಂಗಾಲಿಗೆ ಅಂಗಾಲೂರಲು ತಾವುಂಟು", "ಉಸಿರು ಆಡಬಹುದಲ್ಲಿ ನಿಸೂರಾಗಿ", "ಮನೆ ಅದೆಂದು ನೆಲೆ ಆದ", "ಉಕ್ಕಿನೊಳಗೆ ಮೆತ್ತನೆ ಮಿದುಳು ತಡಿಕೆಯೊಳಗೆ ಗಟ್ಟಿ ಹೃದಯ", "ಕಕ್ಕಿದರೆ ವಿಷ ದಕ್ಕಿದರೆ ಅಮೃತ", "ಆಸರೆ ಸೆರೆಯಾಗದಿರಲು", "ಗರುಕೆಯ ಗುರಿಯಾಗಿಸಿಕೊಂಡು", "ಕಣಿವೆಯ ಮೌನಕ್ಕೆ ಮೌನದ ಕಣಿವೆಗೆ", "ಹದ್ದು ಮೀರಿದೆ ಜೀವದ ಸದ್ದು" ಎಂದು ಬರೆಯುವ ಕವಿಗೆ ಕಂಪು ಕಡಿಮೆಯಾಗುವ ಭಯವಿರಬೇಕಾಗಿಲ್ಲ. "ಜೀವ ಸಂಪಿಗೆಯಲ್ಲಿ ಕಂಪಿದೆಯಾ? ಇನ್ನೂ ಕಂಪಾಗಬೇಕಾ? ಹೇಳಿ?" ಅಂದವರಿಗೆ ಇದು ಉತ್ತರ.

ಸಾಮಾನ್ಯವಾಗಿ ಹೆಂಗಸರು ಕವನ ಬರೆಯುವಾಗ ಉಪಮೆ ರೂಪಕಗಳ ಹಿಂದೆ ಅಡಗಿಕೊಂಡು ಬರೆಯುತ್ತಾರೆ. ಯಾಕೆಂದರೆ ಅವರಿಗೆ ನೇರವಾಗಿ ಮನಸ್ಸನ್ನು ಬಿಚ್ಚಿಡಲು ಭಯ ಅಂತ ಒಂದು ವಾದವಿದೆ. ಆ ವಾದವನ್ನು ಸಮರ್ಥಿಸಲು ಹೆಚ್ಚಾಗಿ ಹೆಂಗಸರು ಅವರಿವರು ಹೇಳುವ ಹಾಗೆ ಉಪಮೆ ರೂಪಕಗಳಲ್ಲೇ ಬರೆಯುವುದುಂಟು. ಇದರಿಂದ ಆಗುವ ಒಂದು ಅಪಾಯವೆಂದರೆ ಕವಿತೆಯಲ್ಲಿ ಯಾರೇ ಇಂತಹದನ್ನು ಬಳಸಿದರೂ ಅದೇ ಕಾರಣಕ್ಕೆ ಎಂದು ನಿರ್ಧರಿಸಿಬಿಡುವ ರೂಢಿ. ಸರಸ್ವತಿ ಕೂಡಾ ರೂಪಕ ಉಪಮೆಗಳಲ್ಲೇ ತನ್ನ ಅಂತರಂಗದ ಜಗತ್ತನ್ನು ಹಿಡಿದಿಟ್ಟಿರುವುದರಿಂದ ಈ ಅನುಮಾನ ಅವಳಿಗೂ ಅನ್ವಯಿಸ ಬೇಕಾಗಿಲ್ಲ. ಏಕೆಂದರೆ ಸರಸ್ವತಿಗೆ ಕಾವ್ಯ ರಚನೆ ಕೇವಲ ರೂಪಕಗಳಲ್ಲಿ ಹಿಡಿದಿಡುವ ಮಾತುಗಳಲ್ಲ.

ಅಲ್ಲಿ ನನಗೆ ಕಾಣಿಸುವುದು ಒಂದು ಹೆಣ್ಣು ಮನಸ್ಸಿನ ತಲ್ಲಣಗಳು. ಪ್ರೀತಿ ಪ್ರೇಮಗಳ ಬಗ್ಗೆ ಇರುವ ಹಂಬಲ, ಜೊತೆಗೇ ಭಯ. ಲೋಕದ ಅನ್ಯಾಯಗಳ ಬಗ್ಗೆ ಇರುವ ತಿರಸ್ಕಾರ, ಯಾವುದನ್ನೂ ಬದಲಿಸಲಾಗದ ಬಗ್ಗೆ ಇರುವ ತೀವ್ರ ಅಸಹಾಯಕತೆ. ಆದರೂ ಇವೆಲ್ಲವನ್ನೂ ಮೀರಿ ಗೆಲ್ಲುವ ಜೀವನ ಪ್ರೀತಿ. ಇವು ಯಾವುವೂ ರೂಢಿಗತ ಕಾವ್ಯದ ರೀತಿಯಲ್ಲಿ ಸೃಷ್ಟಿಯಾಗುವುದಿಲ್ಲ. ಇದನ್ನು ಎಚ್.ಎಸ್.ಆರ್. ಅವರು "ಈ ನಿರಾಕರಣೆಯ ಹಿಂದೆ ಅಘೋಷಿತ ತರ್ಕವಿದೆಯೆಂದೇ ನಾನು ತಿಳಿಯುತ್ತೇನೆ" ಅಂದಿದ್ದಾರೆ. ಸರಸ್ವತಿ ಬರೆದ ಅರಿಕೆಯಲ್ಲಿಯ ಒಂದು ಸಾಲು ಕೂಡಾ ಇದನ್ನೇ ಇನ್ನಷ್ಟು ದೃಢಪಡಿಸುತ್ತದೆ. "ಗೀಚಿ ನೀಗಿ ಕೊಂಡಿರುವುದನ್ನು ತಿರುಗಿ ನೋಡಿದರೆ ಮತ್ತೆ ಅಮರಿಕೊಂಡು ಬಿಡಬಹುದೆಂಬ ಭೀತಿಗೆ ತಿರುಗಿ ನೋಡದವಳು ನಾನು". ಈ ಸಂಕಲನದ ಪ್ರಕಟಣೆಗೂ ಕೂಡಾ ಅವಳಿಗೆ ಭೀತಿಯನ್ನೆದುರುಗೊಳ್ಳಲು ಮತ್ತೊಬ್ಬರು ನಿಲ್ಲಿಸಬೇಕಾಯಿತು. ಇದನ್ನೇ ನಾನು ಶುದ್ಧಕವಿಯ ಮನಸ್ಸು ಅಂತ ಕರೀತೀನಿ. ಇಲ್ಲಿ ಬರೆದ ಯಾವುದೂ ಓದುಗರನ್ನಾಗಲೀ, ವಿಮರ್ಶಕ ಮಹಾಶಯರನ್ನಾಗಲೀ ನೆನಪಿಟ್ಟುಕೊಂಡು ಬರೆದವಲ್ಲ. "ಒಡಲು ಅನುಭವಿಸುವ ಸಂಕಟಕ್ಕೆ ಗಡಿಯೂ ಇಲ್ಲ, ಆಚೆ ಈಚೆಯೂ ಇಲ್ಲ" ಅಂದವಳನ್ನು ನಾವು ಸಾಲು, ಚಿತ್ರ, ಚಿತ್ತಾರಗಳ ಸರಪಳಿಯಲ್ಲಿ ಬಂಧಿಸಲು ಹೋಗಬಾರದು. ಯಾವೊಬ್ಬ ಕವಿಯ ಕವನಗಳನ್ನು ಯಾವತ್ತೂ ಬಿಡಿ ಬಿಡಿಯಾಗಿ ನೋಡದೇ ಇಡಿಯಾಗಿ ನೋಡುವ ನನಗೆ "ಜೀವ ಸಂಪಿಗೆ" ಒಂದು ದೊಡ್ಡ ನಿರಂತರ ಹರಿಯುವ ನದಿಯಂತಹ ಕವನ. ಇಲ್ಲಿ ಧುಮುಕಿ, ಅಲ್ಲಿ ಹರಿದು, ಮತ್ತೊಂದು ಕಡೆ ಮಡುಗಟ್ಟಿ, ಮಗದೊಂದು ಕಡೆ ಆವಿಯಾಗಿ ಅಂತೂ ಸುತ್ತಲ ಗಾಳಿಯನ್ನು ತೇವವಾಗಿಸುತ್ತದೆ. ಅದರಲ್ಲಿ ನಮಗೆ ಒಂದು ಬೊಗಸೆ ಸಿಗಬಲ್ಲದಾದರೆ ಅದೃಷ್ಟ.

ಸರಸ್ವತಿಯ ಅಭಿವ್ಯಕ್ತಿಗೆ ನೂರಾರು ದಾರಿ. ಎಲ್ಲ ಸೃಜನಶೀಲ ವ್ಯಕ್ತಿಗಳಿಗೂ ಹಾಗೆಯೇ. ಚಿತ್ರ, ನಾಟಕ, ಪದ್ಯ, ಯಾರೋ ಎಲ್ಲೋ ಮಸುಕಾದರೆ ಇಲ್ಲಿ ಇವಳು ಮಿಸುಗುವುದು, ಎಲ್ಲವೂ ಅವಳ ವ್ಯಕ್ತಿತ್ವದ ಅಂಶಗಳೇ. ಅವಳೇ "ಈಗ ಗುಡ್ಡ ಸಿಡ್ಲು ಬಿರ್ಗಾಳಿ. ಸೆರ್ಗನಾಗೆ ಮುಚ್ಚಿ ಅವ್‌ಚ್ಕಳ್‌ದೆ ಎಲ್ಲೋಗಿದೀಯಾ?" ಅಂತ ಕನವರಿಸುತ್ತಿದ್ದರೂ ಊರಿಗೆಲ್ಲಾ **ತಾಯಿ.**

"ಜೀವ ಸಂಪಿಗೆ" ಅದಕ್ಕೇ ಬರಿಯ ಇಪ್ಪತ್ತಾರು ಕವನಗಳ ಸಂಕಲನ ಮಾತ್ರವಲ್ಲ, ಗೆಳತಿ ಎಚ್.ಎಲ್. ಪುಷ್ಪ ಹಿನ್ನುಡಿಯಲ್ಲಿ ಹೇಳಿದ ಹಾಗೆ "ಜೀವವೊಂದು ಜೇಡರ ಬಲೆಯಲ್ಲಿ ಸಿಕ್ಕಿ ನರಳಿದರೂ ಅದಕ್ಕೆ ಮೊದಲು ಕೋಶವನು ಒಡೆದಲ್ಲದೆ ಇನ್ನೊಂದು ಕೋಶಕ್ಕೆ ಅಡಿಯಿಡಲು ಅನುಮತಿಯಿಲ್ಲ. ಈ ಅವಸ್ಥಾಂತರಗಳಿಲ್ಲದೇ ಬದುಕಿನಲ್ಲಿ ಬದಲಾವಣೆ ಯಿಲ್ಲ ಎಂಬ ಅರಿವಿನಿಂದಲೇ ಇಲ್ಲಿ ಕಾವ್ಯ ಕರ್ಮ ನಡೆದಿದೆ".

ನನ್ನ ಆತಂಕವೆಂದರೆ ಈ ಕೋಶ ಒಡೆದು ಬರುವ ತರಾತುರಿ ಯಲ್ಲಿ ಸರಸ್ವತಿ ಎಲ್ಲಿ ಹಳೆಯ ಅವಸ್ಥೆಯನ್ನು ಸಂಪೂರ್ಣ ಮರೆತು ಹೊಸ ಹಾದಿಯಲ್ಲಿ ಬರೆಯತೊಡಗಿ ಕಳೆದುಹೋಗುತ್ತಾಳೋ ಅನ್ನುವುದು. ಇನ್ನೊಂದು ದೃಷ್ಟಿಯಿಂದ ನೋಡಿದರೆ ಕಂಬಳಿ ಹುಳ ಚಿಟ್ಟೆಯಾದರೆ ಹುಳವೋ ಚಿಟ್ಟೆಯೋ ಯಾವುದು ಮೊದಲು? ಹುಳವಿಲ್ಲದೇ ಚಿಟ್ಟೆಯಿಲ್ಲ ಅನ್ನುವ ಗ್ರಹಿಕೆ, ಎರಡರ ನಡುವಲ್ಲಿ ಸರಸ್ವತಿಯ ಕವನ ಇದೆ ಅನ್ನಿಸುತ್ತದೆ.

ನಮ್ಮ ಸರಸ್ವತಿಯನ್ನು ಇನ್ನೂ ದೊಡ್ಡ ಮಟ್ಟದಲ್ಲಿ ಗುರುತಿಸಬೇಕು. ಅವಳು ಕೂಡಾ ಯಾರ ಜಪ್ತಿಗೂ ಸಿಗದ ನವಿಲು ! ❑

# ಲಿಂಗತ್ವ (ಜೆಂಡರ್) ಎಂದರೇನು?

ಇಂಗ್ಲಿಷ್ ಮೂಲ :
ಅಂಡರ್‌ಸ್ಟ್ಯಾಂಡಿಂಗ್ ಜೆಂಡರ್

ಲೇಖಕರು : ಕಮಲಾ ಭಾಸಿನ್
ಕನ್ನಡಕ್ಕೆ : ವೆಂ. ವನಜ

*(ಹಿಂದಿನ ಸಂಚಿಕೆಯಿಂದ ಮುಂದುವರಿದಿದೆ)*

ರೂತ್ ಹಾರ್ಟ್‌ಲಿ ಪ್ರಕಾರ, ಸಾಮಾಜೀಕರಣವು ನಾಲ್ಕು ಪ್ರಕ್ರಿಯೆಗಳ ಮೂಲಕ ನಡೆಯುತ್ತದೆ. ಅವೆಂದರೆ, ಸಿದ್ಧಮಾದರೀಕರಣ (manipulation), ಸಿದ್ಧಮಾರ್ಗನಿರ್ದೇಶನ (Canalisation), ಶಾಬ್ದಿಕ ಅಭಿವ್ಯಕ್ತಿಗಳು (Verbal appellations) ಮತ್ತು ಕ್ರಿಯೆಯ ಅನಾವರಣ (activity exposure). ಇವುಗಳನ್ನು ಕೆಳಗೆ ವಿವರಿಸಲಾಗಿದೆ. ಈ ನಾಲ್ಕೂ ಪ್ರಕ್ರಿಯೆಗಳನ್ನು ಸಾಮಾನ್ಯವಾಗಿ ಲಿಂಗದಿಂದ ಪ್ರತ್ಯೇಕಿಸಲಾಗುತ್ತದೆ. ಇವೆಲ್ಲವೂ ಹುಟ್ಟಿನ ಅನಂತರದ ಮಗುವಿನ ಸಾಮಾಜೀಕರಣದ ಗುಣಲಕ್ಷಣಗಳಾಗಿವೆ. (ಓಕ್ಲೆ.ಆನ್ : ಸೆಕ್ಸ್, ಜೆಂಡರ್ ಅಂಡ್ ಸೊಸೈಟಿ: ಪು. 174-175)

ಸಿದ್ಧಮಾದರೀಕರಣ (manipulation) ಅಥವಾ ಅಚ್ಚೊತ್ತುವಿಕೆ (moulding) ಎಂದರೆ **ಒಂದು ಮಗುವನ್ನು ನಡೆಸಿಕೊಳ್ಳುವ ರೀತಿ** ಎಂದಾಗುತ್ತದೆ. ಗಂಡುಮಕ್ಕಳನ್ನು ಆರಂಭದಿಂದಲೇ ಬಲಶಾಲಿಗಳಂತೆ, ಸ್ವತಂತ್ರಜೀವಿಗಳಂತೆ ನೋಡಿಕೊಳ್ಳಲಾಗುತ್ತದೆ ಎನ್ನುವುದನ್ನು ಗಮನಿಸಿದ್ದೇವೆ. ಕೆಲವು ಸಂಸ್ಕೃತಿಗಳಲ್ಲಿ ತಾಯಂದಿರು ಹೆಣ್ಣುಮಗುವಿನ ಕೂದಲ ಬಗ್ಗೆ ಕಾಳಜಿ ವಹಿಸುತ್ತಾರೆ. ಹೆಣ್ಣಿನ ಹಾಗೆ ಕಾಣುವ ಉಡುಗೆ-ತೊಡುಗೆಗಳನ್ನು ಹಾಕುತ್ತಾರೆ. ಅವಳೆಷ್ಟು ಸುಂದರಳಾಗಿದ್ದಾಳೆಂದು ಹೇಳುತ್ತಾರೆ. ಆರಂಭಿಕ ಬಾಲ್ಯದ ಈ ದೈಹಿಕ ಅನುಭವಗಳು ಹುಡುಗ-ಹುಡುಗಿಯರ ಆತ್ಮಗ್ರಹಿಕೆ / ಸ್ವಗ್ರಹಿಕೆ (self-perception)ಯನ್ನು ರೂಪಿಸುವಲ್ಲಿ ಬಹಳ ಮಹತ್ವದ ಪಾತ್ರವನ್ನು ಹೊಂದಿವೆ.

ಎರಡನೆಯ ಪ್ರಕ್ರಿಯೆಯಾದ ಸಿದ್ಧಮಾರ್ಗ ನಿರ್ದೇಶನ (Canalisation) ಗಂಡು ಮತ್ತು ಹೆಣ್ಣು ಮಕ್ಕಳ ಗಮನವನ್ನು ವಸ್ತುಗಳ ಅಥವಾ ವಸ್ತುಸಂಬಂಧೀ ಅಂಶಗಳ ಕಡೆಗೆ ಹರಿಸುವುದಾಗಿದೆ. ಇದಕ್ಕೆ ಉದಾಹರಣೆಗಳೆಂದರೆ, ಹೆಣ್ಣುಮಕ್ಕಳಿಗೆ ಆಟವಾಡಲು ಬೊಂಬೆ ಅಥವಾ ಮಡಕೆ ಮತ್ತು ಪಾತ್ರೆಗಳನ್ನು ಕೊಟ್ಟರೆ, ಗಂಡು ಮಕ್ಕಳಿಗೆ ಪಿಸ್ತೂಲು, ಕಾರು ಮತ್ತು ವಿಮಾನಗಳೊಂದಿಗೆ ಆಟವಾಡಲು ಪ್ರೋತ್ಸಾಹಿಸಲಾಗುತ್ತದೆ. ದಕ್ಷಿಣ ಏಷ್ಯಾದ ಕಾರ್ಮಿಕರ ಮನೆಗಳಲ್ಲಿ ಹೆಣ್ಣು ಮಕ್ಕಳು ಮಡಕೆಗಳು ಮತ್ತು ಬಾಣಲಿಗಳೊಡನೆ ಆಡುವುದಿಲ್ಲ. ಅವರು ನಿಜವಾದ ಮಡಕೆಗಳು ಮತ್ತು ಬಾಣಲಿಗಳನ್ನು, ನಿಜವಾದ ಮನೆಗಳನ್ನು ತಾವು ಇನ್ನೂ ಚಿಕ್ಕವರಿದ್ದಾಗಲೇ ತೊಳೆಯಲಾರಂಭಿಸುವಂತೆ, ನಿಜವಾದ ಮಕ್ಕಳ ಆರೈಕೆ ಮಾಡುವಂತೆ ಮಾಡಲಾಗುತ್ತದೆ. ಆದರೆ ಹುಡುಗರನ್ನು ಶಾಲೆಗೆ ಅಥವಾ ಮನೆಯ ಹೊರಗೆ ದುಡಿಯಲು ಕಳುಹಿಸಲಾಗುತ್ತದೆ. ಹೀಗೆ ಭಿನ್ನ ರೀತಿಯಲ್ಲಿ ನೋಡಿಕೊಳ್ಳುವ ಮೂಲಕ ಹೆಣ್ಣುಮಕ್ಕಳ ಮತ್ತು ಗಂಡುಮಕ್ಕಳ ಆಸಕ್ತಿಗಳನ್ನು ಭಿನ್ನವಾಗಿರುವಂತೆ ನೋಡಿಕೊಳ್ಳಲಾಗುತ್ತದೆ. ಮಕ್ಕಳು ಭಿನ್ನವಾದ ಸಾಮರ್ಥ್ಯಗಳು, ಧೋರಣೆಗಳು, ಆಸೆ-ಆಕಾಂಕ್ಷೆಗಳು ಮತ್ತು ಕನಸುಗಳನ್ನು ಬೆಳೆಸಿಕೊಳ್ಳುತ್ತಾರೆ. ನಿಶ್ಚಿತ ವಸ್ತುಗಳೊಂದಿಗೆ ಪರಿಚಿತತೆ ಅವರ ಆಯ್ಕೆಗಳನ್ನು ನಿರ್ದೇಶಿಸುತ್ತದೆ.

ಶಾಬ್ದಿಕ ಅಭಿವ್ಯಕ್ತಿಗಳು (Verbal appellations) ಕೂಡ ಹುಡುಗರು ಮತ್ತು ಹುಡುಗಿಯರಿಗೆ ಬೇರೆಬೇರೆಯಾಗಿರುತ್ತವೆ. ಉದಾಹರಣೆಗೆ, 'ಓಹ್, ಎಷ್ಟು ಚೆನ್ನಾಗಿ ಕಾಣಿಸುತ್ತೀ' ಎಂದು ನಾವು ಹುಡುಗಿಯರಿಗೆ ಹೇಳಿದರೆ, 'ನೀನು ದೊಡ್ಡವನಾಗಿ ಬಲಶಾಲಿಯಾಗಿ ಕಾಣಿಸುತ್ತಿದ್ದೀ' ಎಂದು ಹುಡುಗನಿಗೆ ಬಹಳ ಸಂದರ್ಭಗಳಲ್ಲಿ ಹೇಳುತ್ತೇವೆ. ಇಂಥ ಅಭಿಪ್ರಾಯಗಳು ಹುಡುಗ-ಹುಡುಗಿಯರ, ಪುರುಷ-ಮಹಿಳೆಯರ ಸ್ವಾನನ್ಯತೆ (self-identity)ಯನ್ನು ರೂಪಿಸುತ್ತದೆನ್ನುವುದನ್ನು ಸಂಶೋಧನಾಧ್ಯಯನಗಳು ಹೇಳುತ್ತವೆ. ಮಕ್ಕಳು ತಮ್ಮನ್ನು ಗಂಡು ಅಥವಾ ಹೆಣ್ಣೆಂದು ಭಾವಿಸುವುದನ್ನು ಕಲಿಯುತ್ತಾರಲ್ಲದೆ ಬೇರೆ ಗಂಡು-ಹೆಣ್ಣುಗಳೊಂದಿಗೆ ತಮ್ಮನ್ನು ಗುರುತಿಸಿಕೊಳ್ಳುತ್ತಾರೆ. ಕುಟುಂಬದ ಸದಸ್ಯರು ತುಂಬಾ ಚಿಕ್ಕಮಕ್ಕಳೊಂದಿಗೆ ಮಾತಾಡುವ ರೀತಿಯಲ್ಲೇ ನೇರವಾಗಿ ಲಿಂಗತ್ವದ ಪಾತ್ರಗಳ ಅಂಶಗಳನ್ನು ನಿರಂತರವಾಗಿ ತಿಳಿಸಿ ಪಸರಿಸುತ್ತಾರೆ. ಅಲ್ಲದೆ ಪ್ರತಿಯೊಂದು ಮಗುವಿಗೆ ನೀಡುವ ಮಹತ್ವವನ್ನೂ ತಿಳಿಸುತ್ತಾರೆ.

ಅಂತಿಮವಾದ ಪ್ರಕ್ರಿಯೆಯೆಂದರೆ, ಕ್ರಿಯೆಯ ಅನಾವರಣ. ಗಂಡು ಮತ್ತು ಹೆಣ್ಣು ಮಕ್ಕಳಿಬ್ಬರೂ ತಮ್ಮ ಬಾಲ್ಯದಿಂದಲೇ ಈ ಸಾಂಪ್ರದಾಯಿಕವಾದ ಗಂಡತನದ ಮತ್ತು ಹೆಣ್ತನದ ಚಟುವಟಿಕೆಗಳಿಗೆ ತಮ್ಮನ್ನು ತಾವು ಒಡ್ಡಿಕೊಂಡಿರುತ್ತಾರೆ. ಹೆಣ್ಣು ಮಕ್ಕಳಿಗೆ ಮನೆಗೆಲಸಗಳಲ್ಲಿ ತಮ್ಮ ತಾಯಂದಿರಿಗೆ ನೆರವಾಗಲು ತಿಳಿಸಿದರೆ, ಗಂಡುಮಕ್ಕಳಿಗೆ ತಮ್ಮ ತಂದೆಯೊಂದಿಗೆ ಮನೆಯ ಹೊರಗಿರಲು ತಿಳಿಸಲಾಗುತ್ತದೆ. ಹೆಣ್ಣು-ಗಂಡುಗಳನ್ನು ಪ್ರತ್ಯೇಕಿಸಲಾದ ಸಮುದಾಯಗಳಲ್ಲಿ ಬಾಲಕ-ಬಾಲಕಿಯರು ಎರಡು ವಿಶಿಷ್ಟ ಸ್ಥಳಗಳಲ್ಲಿ ವಾಸಿಸುತ್ತಾರೆ. ಮಾತ್ರವಲ್ಲದೆ ಬೇರೆಯೇ ಆದ ಚಟುವಟಿಕೆಗಳಿಗೆ ತೆರೆದುಕೊಂಡಿರುತ್ತಾರೆ. ಈ ಪ್ರಕ್ರಿಯೆಗಳ ಮೂಲಕವೇ ಮಕ್ಕಳು ಗಂಡತನ ಮತ್ತು ಹೆಣ್ತನಗಳ ಅರ್ಥವನ್ನು ಗ್ರಹಿಸುತ್ತಾರೆ. ಅವುಗಳನ್ನು ಹೆಚ್ಚುಕಡಿಮೆ ಅಪ್ರಜ್ಞಾಪೂರ್ವಕವಾಗಿ ಅಂತರ್ಗತಗೊಳಿಸಿಕೊಳ್ಳುತ್ತಾ ಹೋಗುತ್ತಾರೆ.

ಒಂದು ವೇಳೆ ಸಾಮಾಜೀಕರಣದ ಈ ಪ್ರಕ್ರಿಯೆ ಮುಂದುವರಿಯುತ್ತಲೇ ಇರುವುದಾದರೆ "ಪ್ರಕೃತಿ" ಅಥವಾ "ಪೋಷಣೆ"ಗಳ ನಡುವಿನ ಚರ್ಚೆ ಮುಂದುವರಿಯುತ್ತಿರುವುದೇಕೆ? ಹೆಣ್ಣು ಮತ್ತು ಗಂಡು ಮಕ್ಕಳ ನಡುವಿನ ವ್ಯತ್ಯಾಸಗಳಿಗೆ ಅವರನ್ನು ನೋಡಿಕೊಳ್ಳುವ ಅಥವಾ ಬೆಳೆಸುವ ರೀತಿಯೇ ಕಾರಣವೆನ್ನುವುದು ಸ್ಪಷ್ಟವಾಗಿ ಕಾಣುತ್ತಿಲ್ಲವೆ?

ಅಚ್ಚರಿಯ ಸಂಗತಿಯೆಂದರೆ, ನಮ್ಮ ಮಕ್ಕಳಿಗೆ ನಾವೇನು ಮಾಡುತ್ತಿದ್ದೇವೆನ್ನುವುದರ ಅರಿವು ನಮಗಿಲ್ಲ. ಬಾಲಕ-ಬಾಲಕಿಯರು ಭಿನ್ನರಾಗಿರುವುದರಿಂದಲೇ ಅವರನ್ನು ವಿಭಿನ್ನರೀತಿಯಲ್ಲಿ ಕಾಣುತ್ತಿದ್ದೇವೆಂದು ಭಾವಿಸುತ್ತೇವೆ. ಶಾಲೆಗಳು, ಸಮುದಾಯಗಳು ಹಾಗೂ ನಾವು ಅವರನ್ನು ನೋಡಿಕೊಳ್ಳುವ ರೀತಿಯಿಂದಾಗಿಯೇ ಬೇರೆಬೇರೆಯಾಗಿ ಬೆಳೆಯುತ್ತಾರೆನ್ನುವುದನ್ನು ನಾವು ಒಪ್ಪಿಕೊಳ್ಳದೇ ಇರಬಹುದು.

ತಮ್ಮನ್ನು ರೂಪಿಸಲಾಗುತ್ತಿದೆಯೆಂಬ ಸತ್ಯದ ಅರಿವಿಲ್ಲದೆ ಮಕ್ಕಳು

ಈ ಪಾತ್ರಗಳನ್ನು ಕಲಿಯುತ್ತಾ ಹೋಗುತ್ತಾರೆ. ಒಂದು ವೇಳೆ ಬಾಲಕ-ಬಾಲಕಿಯರಲ್ಲಿ ವ್ಯತ್ಯಾಸಗಳೇ ಇರದಿದ್ದಲ್ಲಿ, ಒಂದು ವೇಳೆ ಎಲ್ಲಾ ಬಾಲಕ-ಬಾಲಕಿಯರು ಒಂದೇ ರೀತಿಯ ವರ್ತನೆಗಳನ್ನು ಹೊಂದಿದ್ದಲ್ಲಿ ಲಿಂಗತ್ವದ ಪಾತ್ರಗಳು ಲಿಂಗಾಧರಿತವಾದವುಗಳೆಂದು ನಾವು ವಾದಿಸಬಹುದಿತ್ತು. ಆದರೆ ನಾವು ಕಂಡಂತೆ ಅದು ಹಾಗಿಲ್ಲ.

ಮಕ್ಕಳು ಮತ್ತು ವಯಸ್ಕರಿಗೆ ಅನುಮತಿಗಳು ಅಥವಾ ಅವರು ತಮ್ಮ ಲಿಂಗತ್ವದ ಪಾತ್ರಗಳಿಗೆ ಹೊರತಾಗಿ ನಡೆದುಕೊಂಡಾಗಿನ ಅಸಮ್ಮತಿಗಳು, ನಿರೀಕ್ಷಿತ ಗಂಡು-ಹೆಣ್ಣಿನ ವರ್ತನೆಗಳನ್ನು ಪ್ರತಿಯೊಬ್ಬರೂ ಒಪ್ಪಿಕೊಳ್ಳುವಂತೆ ಮಾಡುವ ಮತ್ತೊಂದು ಸಶಕ್ತವಾದ ಮಾರ್ಗವಾಗಿದೆ. ಅನುಮತಿ (ಅಥವಾ ಅಸಮ್ಮತಿ)ಯ ಅತ್ಯಂತ ಸಾಮಾನ್ಯ ರೂಪವೆಂದರೆ ಸಾಮಾಜಿಕ ಅವಹೇಳನ (Social ridicule).

ಸಾಮಾಜಿಕ ಕಟ್ಟುಪಾಡುಗಳಿಗೆ ಹೊರತಾಗಿ ವರ್ತಿಸಲು ಧೈರ್ಯ ಮಾಡಿದ ಕೇರಳದ ಗ್ರಾಮವೊಂದರ ಮಹಿಳೆಯರ ಮೇಲಾದ ದುಷ್ಪರಿಣಾಮವೇನೆಂದು ಹೇಳುತ್ತೇನೆ. ಅದೇನೆಂದರೆ, ಮೂವರು ಶ್ರಮಿಕ ಮಹಿಳೆಯರು ತಮ್ಮ ಪುರುಷ ಸಹೋದ್ಯೋಗಿಗಳು ಪ್ರತಿದಿನ ಹೊಟೇಲೊಂದಕ್ಕೆ ಹೋಗುತ್ತಿದ್ದುದನ್ನು ಕಂಡರು. ತಮಾಷೆಗಾಗಿ ತಾವೂ ಒಂದು ದಿನ ಅಲ್ಲಿಗೆ ಹೋಗಲು ನಿರ್ಧರಿಸಿದರು. ಇದರ ಪರಿಣಾಮವಾಗಿ ಎಲ್ಲಾ ಥರದ ಪುರುಷರು ಇವರನ್ನು ಹಿಂಬಾಲಿಸತೊಡಗಿದರಷ್ಟೇ ಅಲ್ಲ, ಲೈಂಗಿಕ ತೃಪ್ತಿಯನ್ನು ಬಯಸಿ ಇವರನ್ನು ಕಾಡತೊಡಗಿದರು. ಇದಕ್ಕೆಲ್ಲ ಕಾರಣ ಅವರು 'ಕುಲೀನ' ಮಹಿಳೆಯರು ಪ್ರವೇಶಿಸದ ಸ್ಥಳಕ್ಕೆ ಹೋಗುವ ಧೈರ್ಯ ಮಾಡಿದ್ದರು. ಅವರನ್ನು 'ಕೆಟ್ಟ' ಮಹಿಳೆಯರೆಂದು ಪರಿಭಾವಿಸಲಾಗಿತ್ತು. 'ನೀವು ಹೊಟೇಲ್ (Pub)ಗೆ ಬರಲು ಸಾಧ್ಯವಾದರೆ, ಲೈಂಗಿಕ ಸುಖಕ್ಕೂ ನೀವು ದಕ್ಕಬೇಕಾಗುತ್ತದೆ' ಎನ್ನುವುದು ಇದರ ಹಿಂದಿನ ತರ್ಕವಾಗಿತ್ತು. ಈ ಸಾಮಾಜಿಕ ಅವಹೇಳನ ಮತ್ತು ಬೆದರಿಕೆಗಳನ್ನು ಎದುರಿಸಲಾಗದ ಆ ಇಬ್ಬರು ಯುವತಿಯರು ಆತ್ಮಹತ್ಯೆಗೆ ಶರಣಾದರು.

ಸಾಮಾಜಿಕ ಅನುಮತಿಗಳಷ್ಟೇ ಅಲ್ಲದೆ ಆರ್ಥಿಕ ಅನುಮತಿಗಳೂ ಇರುತ್ತವೆ. ಆನ್ ಓಕ್ಲೆಯವರ ಅಭಿಪ್ರಾಯದಲ್ಲಿ, ಮಕ್ಕಳನ್ನು ಹೊಂದಿರುವ ಒಂಟಿ ಮಹಿಳೆಯರಿಗೆ ಎದುರಾಗುವ ಕಠೋರ ಸಮಸ್ಯೆಗಳು ಮತ್ತವರ ಆರ್ಥಿಕ ತೊಂದರೆಗಳು ಸಮಾಜ ಅವರನ್ನು ಒಪ್ಪಿಕೊಳ್ಳದಿರುವುದರ ಸೂಚಕವಾಗಿದೆ. ಹೆಚ್ಚಿನ ಕುಟುಂಬಗಳು ಗೊತ್ತಾದ ಮಾನದಂಡಗಳು ಮತ್ತು ಆಚರಣೆಗಳಿಗೆ ಹೊರತಾಗುವ ಮಕ್ಕಳಿಗೆ ಆರ್ಥಿಕ ಬೆಂಬಲ ನೀಡಲು ನಿರಾಕರಿಸುತ್ತವೆ ಅಥವಾ ಬೆದರಿಕೆ ಹಾಕುತ್ತವೆ.

**ಕೆಲವು ನಿರ್ದಿಷ್ಟ ಗುಣಲಕ್ಷಣಗಳನ್ನು ಮತ್ತು ಗುಣಗಳನ್ನು ಪುರುಷ ಸಂಬಂಧಿತ, ಮತ್ತೆ ಉಳಿದವು ಮಹಿಳಾ ಸಂಬಂಧಿತವಾದವುಗಳೆಂಬ ಹಣೆಪಟ್ಟಿ ಹಚ್ಚುವ ವ್ಯವಹಾರವನ್ನು ಕುರಿತಂತೆ ಇನ್ನಷ್ಟು ವಿವರವಾಗಿ ತಿಳಿಸುತ್ತೀರಾ?**

ಕೆಲವು, ನಿರ್ದಿಷ್ಟ ಗುಣಗಳು ಗಂಡಿನ ಅಥವಾ ಹೆಣ್ಣಿನ ಗುಣಗಳಾಗಿರಬೇಕಾದ ಅಥವಾ ಎರಡೂ ಆಗಿರಬೇಕಾದ ಅಗತ್ಯವಿಲ್ಲದಿದ್ದಾಗಲೂ ಅವುಗಳನ್ನು ಹಾಗೆ ನಿರ್ವಚಿಸಲಾಗುತ್ತದೆ. ಉದಾಹರಣೆಗೆ:

| | |
|---|---|
| ದೇಹ | ಮನಸ್ಸು / ಬುದ್ಧಿ |
| ಪ್ರಕೃತಿ | ಸಂಸ್ಕೃತಿ |
| ಭಾವನೆ | ವಿವೇಚನೆ |
| ಕರ್ಮ | ಕರ್ತೃ |
| ಖಾಸಗಿ | ಸಾರ್ವಜನಿಕ |

ಹೀಗೆ ಎಡಭಾಗದಲ್ಲಿ ತಿಳಿಸಿದ ಗುಣಗಳು 'ಹೆಣ್ಣಿಗೆ' ಸಂಬಂಧಿಸಿದವು ಹಾಗೂ ಬಲಭಾಗದಲ್ಲಿರುವವು 'ಗಂಡಿಗೆ' ಸಂಬಂಧಿಸಿದವೆಂದು ಭಾವಿಸಲಾಗುತ್ತದೆ. ಈ ಎರಡನ್ನು ವಿರುದ್ಧ ದಿಕ್ಕಿನಲ್ಲಿ ಇಟ್ಟಿರುವುದಷ್ಟೇ ಅಲ್ಲದೆ ಅವುಗಳ ನಡುವೆ ಏಣಿಶ್ರೇಣಿಯನ್ನು ಸೃಷ್ಟಿಸಲಾಗಿದೆ. ಬುದ್ಧಿ/ಮನಸ್ಸು ದೇಹಕ್ಕಿಂತ ಶ್ರೇಷ್ಠ; ಸಂಸ್ಕೃತಿ ಪ್ರಕೃತಿಯ ಮೇಲಿನ ಪರಿಷ್ಕರಣೆ ಹಾಗೂ ಅದಕ್ಕಿಂತ ಶ್ರೇಷ್ಠವೆಂದು ಭಾವಿಸಲಾಗಿದೆ. ವಿವೇಚನೆಯುಳ್ಳವರು ಮತ್ತು ವಸ್ತುನಿಷ್ಠರಾಗಿರುವವರು ವ್ಯಕ್ತಿನಿಷ್ಠರಾದ ಮತ್ತು ಭಾವಜೀವಿಗಳಿಗಿಂತ ಶ್ರೇಷ್ಠರೆಂದು ತಿಳಿಯಲಾಗುತ್ತದೆ. ಮಹಿಳೆಯರು ದೇಹಗಳು, ಹೆಚ್ಚುಕಡಿಮೆ ಪ್ರಕೃತಿಯಂತೆ (ಪ್ರಾಣಿಗಳಂತೆ ಪೋಷಣೆ ಹೊಂದಿದವರು); ಪುರುಷರು ಬುದ್ಧಿ/ಮನಸ್ಸುಗಳು; ಚಿಂತಿಸುವ, ವಿವೇಚಿಸುವ, ಕ್ರಿಯಾವಂತ ಜೀವಿಗಳು; ಇವರು ಪ್ರಕೃತಿಯ ಮೇಲೆ ಕಾರ್ಯಪ್ರವೃತ್ತರಾಗಿ 'ಅದನ್ನು' ಸಂಸ್ಕೃತಿಯಾಗಿ ಮಾರ್ಪಡಿಸುವವರು. ಆದ್ದರಿಂದ ಪುರುಷರು ಶ್ರೇಷ್ಠರು; ಪ್ರಕೃತಿಗಿಂತ ಮೇಲ್ಪಟ್ಟವರು; ಅವರು ಪ್ರಕೃತಿಯನ್ನು ಮನಬಂದಂತೆ ನಡೆಸಿಕೊಳ್ಳಬಲ್ಲವರು.

ಮೇಲೆ ಹೇಳಿದ ದ್ವಿತ್ವಗಳಲ್ಲಿ ಎಡಬದಿಯವು ಮಹಿಳೆಯರಿಗೆ ಮಾತ್ರ ಸಂಬಂಧಿಸಿಲ್ಲ. ಮೂಲನಿವಾಸಿಗಳು ಮತ್ತು ಬಡವರನ್ನು ಕೂಡ ಇದೇ ರೀತಿಯಲ್ಲಿ ವರ್ಗೀಕರಿಸಲಾಗಿದೆ. ಈ ಕಾರಣದಿಂದಾಗಿಯೇ ಮಹಿಳೆಯರಂತೆಯೇ ಗಿರಿಜನರು, ಅರಣ್ಯವಾಸಿಗಳು, ಸಣ್ಣ ರೈತರು ಮತ್ತು ಮೀನುಗಾರರನ್ನು ಅಭಿವೃದ್ಧಿಯೋಜಕರು ಅಲಕ್ಷಿಸಬಹುದು. ಅವರಿಗೆ ತಿಳಿಯದಂತೆ, ಅವರ ಒಪ್ಪಿಗೆಯಿಲ್ಲದೆ ಕಾಡುಗಳನ್ನು ಕಡಿಯಬಹುದು ಹಾಗೂ ಭೂಮಿಯನ್ನು ವಶಪಡಿಸಿಕೊಳ್ಳಬಹುದು. ಇದರಿಂದಲೇ ಲಕ್ಷಾಂತರ ಜನರು 'ಅಭಿವೃದ್ಧಿ ನಿರಾಶ್ರಿತ'ರಾಗುತ್ತಾರೆ; ಅತ್ಯಂತ ಅಮಾನವೀಯ ಪರಿಸ್ಥಿತಿಗಳಲ್ಲಿ ತಮ್ಮ ಜೀವನೋಪಾಯಕ್ಕಾಗಿ ದುಡಿಯಲು ನಗರ ಪ್ರದೇಶಗಳಲ್ಲಿ ಭಯಾನಕವಾದ ಕೊಳಗೇರಿಗಳಿಗೆ ಬಂದು ತಲುಪಿಬಿಡುತ್ತಾರೆ.

ಜಾಗತಿಕಮಟ್ಟದಲ್ಲಿ, ಮೂರನೆಯ ಜಗತ್ತು ಅಥವಾ ದಕ್ಷಿಣ ರಾಷ್ಟ್ರಗಳು ದೇಹವಾಗಿ, ಮೊದಲ ಜಗತ್ತು ಬುದ್ಧಿಯಾಗಿ ಪರಿಗಣಿತವಾಗುತ್ತದೆ. ಮೂರನೆಯ ಜಗತ್ತು ಪ್ರಕೃತಿಯಾದರೆ, ಮೊದಲ ಜಗತ್ತು ಸಂಸ್ಕೃತಿಯಾಗುತ್ತದೆ; ಮೂರನೆಯ ಜಗತ್ತು ಭಾವನಾಶೀಲ ಮತ್ತು ವಿವೇಚನಾರಹಿತವಾದುದಾದರೆ, ಮೊದಲ ಜಗತ್ತು ವಿವೇಚನಾಶೀಲ, ವೈಜ್ಞಾನಿಕ ಮತ್ತು ಆಧುನಿಕವಾದುದಾಗುತ್ತದೆ.

ಲಿಂಗತ್ವ ಮತ್ತು ವರ್ಗ, ಜಾತಿ, ಜನಾಂಗ, ಮೊದಲ ಜಗತ್ತು ಮತ್ತು ಮೂರನೆಯ ಜಗತ್ತು ಮತ್ತಿತರ ಏಣಿಶ್ರೇಣಿಗಳ ನಡುವಿನ ಕೊಂಡಿಗಳನ್ನು ತಿಳಿದುಕೊಳ್ಳುವುದು ಮುಖ್ಯ.



**"ಮೂರನೆಯ ಜಗತ್ತನ್ನು ವಸಾಹತೀಕರಣಗೊಳಿಸುತ್ತಲೇ ಜನರಿಂದ ಅಧಿಕಾರ,**

**ಆರ್ಥಿಕತೆ ಮತ್ತು ಜ್ಞಾನಸಂಪತ್ತನ್ನು ಕಸಿದುಕೊಂಡು ಹಿಂದುಳಿದವರನ್ನಾಗಿ ಮಾಡಿದಂತೆಯೇ ಮಹಿಳೆಯರಿಂದ ಅವರ ಅಧಿಕಾರ, ಆರ್ಥಿಕತೆ ಮತ್ತು ಜ್ಞಾನಸಂಪತ್ತುಗಳನ್ನು ಕಸಿದುಕೊಂಡು ಅವರನ್ನು ಸಾಮಾಜೀಕರಣಗೊಳಿಸಿ ಈಗಿರುವಂತೆ 'ಗೃಹಿಣಿ'ಯರನ್ನಾಗಿ ಮಾಡಲು ಮುನ್ನೂರು ವರ್ಷಗಳ ಕಾಲ ನಡೆಸಿದ ಮಾಟಗಾತಿ-ಬೇಟೆ (Witch hunting) ಅಗತ್ಯವಾಗಿತ್ತು. ಗೃಹಿಣಿ-ಮತ್ತವಳೊಡನಿರುವ 'ಹಿಂದುಳಿದಿರುವಿಕೆ' – ಎನ್ನುವುದು ಕೃತಕ ಉತ್ಪನ್ನ; ಇದು ಕಲ್ಪಿಸಿಕೊಳ್ಳಲಾಗದ ಹಿಂಸಾತ್ಮಕ ಅಭಿವೃದ್ಧಿಯ ಪರಿಣಾಮ. ಇದರ ಮೇಲೆ (ಹಿಂಸಾತ್ಮಕ ಅಭಿವೃದ್ಧಿ) ನಮ್ಮ ಇಡೀ ಆರ್ಥಿಕತೆ, ಕಾನೂನು, ರಾಜಕೀಯ ವ್ಯವಸ್ಥೆ, ವಿಜ್ಞಾನ, ಕಲೆ ಮತ್ತು ರಾಜಕಾರಣ, ಕುಟುಂಬ, ಖಾಸಗಿ ಆಸ್ತಿ ಹಾಗೂ ಆಧುನಿಕ ಸಂಸ್ಥೆಗಳೆಲ್ಲವೂ ರಚಿತವಾಗಿವೆ. ಈ ಮೂರನೆಯ ಜಗತ್ತು ಮಾಟಗಾತಿ-ಬೇಟೆಯ ದಿನಗಳ 'ಮಾಟಗಾತಿ' ಯಾಗಿದೆ; ಇಂದು, ಸಾಮಾನ್ಯ ಗೃಹಿಣಿ 'ವಿಶ್ವ ಗೃಹಿಣಿ'ಯಾಗಿದೆ. ಇದರಲ್ಲಿ ಮೂರನೆಯ ಜಗತ್ತಿನ ಪುರುಷರೂ ಸೇರ್ಪಡೆಯಾಗಿದ್ದಾರೆ. ಗಂಡ-ಹೆಂಡಿರ ನಡುವಿನ ಸಂಬಂಧ, ಮೊದಲ ಜಗತ್ತು ಮತ್ತು ಮೂರನೆಯ ಜಗತ್ತುಗಳ ನಡುವಿನ ಸಂಬಂಧದಲ್ಲಿ ಪುನರಾವರ್ತನೆಗೊಂಡಿದೆ. (ಕ್ಲಾಡಿಯಾ ವೊನ್ ವರ್ಲ್‌ಹಾಫ್ : ದಿ ಪ್ರಾಲಿಟೇರಿಯನ್ ಈಸ್ ಡೆಡ್ : ಲಾಂಗ್ ಲಿವ್ ದಿ ಹೌಸ್‌ವೈಫ್ : ಪು. 177)"**

ಕೇವಲ ಗುಣ ಮತ್ತು ಗುಣಲಕ್ಷಣಗಳಷ್ಟೇ ಅಲ್ಲ, ಸ್ಥಳಾವಕಾಶಗಳು (spaces) ಕೂಡ ಲಿಂಗತ್ವೀಕರಣಗೊಂಡಿವೆ. ಹೊಟೇಲು (Pub), ಫುಟ್‌ಬಾಲ್ ಕ್ರೀಡಾಂಗಣ, ರಸ್ತೆಗಳು ಕೂಡುವ ಸ್ಥಳ, ಟೀ-ಅಂಗಡಿ, ಬೀಡಾ ಅಂಗಡಿ, ಚಿತ್ರಮಂದಿರಗಳೆಲ್ಲಾ ಪುರುಷರ ಸ್ಥಳಗಳಾಗಿವೆ. ಸಾಮಾನ್ಯವಾಗಿ ಮಹಿಳೆಯರು ಆ ಸ್ಥಳಗಳಿಗೆ ಹೋಗುವಾಗ ಪುರುಷರು ಜೊತೆಗಿರುತ್ತಾರೆ. ಒಂದು ವೇಳೆ ಒಬ್ಬರೆ ಹೋಗಬೇಕಾದಾಗ ಮಹಿಳೆಯರು ತಮಗೆ ಯಾವ ತೊಂದರೆಯೂ ಆಗಬಾರದೆಂದು ಬಯಸಿದ್ದರೆ ಅಲ್ಲಿಂದ ಆದಷ್ಟು ಬೇಗ ಹೊರಹೋಗುವುದನ್ನು ನಿರೀಕ್ಷಿಸಲಾಗುತ್ತದೆ. ಎಂಥಾ ಸಂದರ್ಭದಲ್ಲೂ ತಾವು ಪುರುಷರಂತೆ ಅಡ್ಡಾಡುವುದನ್ನು ಅವರು ಯೋಚಿಸುವಂತಿಲ್ಲ.

ಅದೇರೀತಿ ಅಡಿಗೆಮನೆ ಅಥವಾ ಸಾರ್ವಜನಿಕ ಬಾವಿಗಳು ಹೆಚ್ಚು ಕಡಿಮೆ ಸಂಪೂರ್ಣವಾಗಿ ಹೆಣ್ಣಿನ ಸ್ಥಳಗಳಾಗಿವೆ. ಆದರೆ ಸಂಪೂರ್ಣವಾಗಿ ಮಹಿಳೆಯರಿಗೇ ಮೀಸಲಾದ ಸಾರ್ವಜನಿಕ ಸ್ಥಳವೊಂದೂ ನನ್ನ ಕಣ್ಣಿಗೆ ಬಿದ್ದಿಲ್ಲ. ಅವರಿಗೆ ತಮಗೆ ಮಾತ್ರವೇ ಇರುವ ಮನರಂಜನೆ ಅಥವಾ ದುಡಿಮೆಯ ಸ್ಥಳ ಎನ್ನುವುದು ಇಲ್ಲ. ಢಾಕಾದಲ್ಲಿ ಕೆಲವೇ ಮಹಿಳೆಯರು **'ಅಡ್ಡಾ'** ಎಂಬ ಹೆಸರಿನ ವಾರಪತ್ರಿಕೆಯೊಂದನ್ನು ಆರಂಭಿಸಿದ್ದಾರೆ. **'ಅಡ್ಡಾ'** ಶಬ್ದವನ್ನು ಸಾಮಾನ್ಯವಾಗಿ ಪುರುಷರು ಕೂಡಿ ಹರಟುವ, ತಿನ್ನುವ, ಕುಡಿಯುವ ಮತ್ತು ಸಂತೋಷವಾಗಿರುವ ಕೂಟಕ್ಕೆ ಅಥವಾ ಸಮಾರಂಭಕ್ಕೆ ಬಳಸುತ್ತಾರೆ. **'ಅಡ್ಡಾ'** ಪದವನ್ನು ಮಹಿಳೆಯರು ಬಳಸುವುದನ್ನು ಹಲವು ಪುರುಷರು ಮತ್ತು ಕೆಲವರು ಮಹಿಳೆಯರು ವಿರೋಧಿಸಿದರು. ಏಕೆಂದರೆ, **'ಅಡ್ಡಾ'**ದ ಪರಿಕಲ್ಪನೆಯೇ ಪುರುಷ ಸಂಬಂಧವಾದುದು - ಮಹಿಳೆಯರಿಗೆ 'ಅಗೌರವಯುತ'ವಾದದ್ದು. 'ಗೌರವಸ್ಥ' ಪುರುಷರಿಗೆ ಒಳ್ಳೆಯದೆನಿಸುವ ಪದಗಳು ಮತ್ತು ಚಟುವಟಿಕೆಗಳು 'ಗೌರವಸ್ಥ' ಮಹಿಳೆಯರಿಗೆ ಒಳ್ಳೆಯದೆಂದು ಪರಿಗಣಿಸ ಲಾಗುವುದಿಲ್ಲ. ಇದು ಪಿತೃಪ್ರಧಾನತೆಯ ತರ್ಕ.

ಮನೆಯಲ್ಲಿ ಕೂಡ ಪುರುಷನು ಮನೆಯವರಿಂದ ವಿಚಲಿತನಾಗದಂತೆ ಅವನಿಗಾಗಿ ಪ್ರತ್ಯೇಕ ನಿಶ್ಶಬ್ದವಾದ ಕೊಠಡಿ ಅಥವಾ ಸ್ಥಳವನ್ನು ಮೀಸಲಿರಿಸಲಾಗುತ್ತದೆ. ಕಾರ್ಯಾಗಾರಗಳಲ್ಲಿ ನಮಗೆ ತಿಳಿದುಬಂದ ಅಂಶಗಳೆಂದರೆ, ಕುಟುಂಬದ ಸಂಪನ್ಮೂಲಗಳು ಅಥವಾ ವಸ್ತುಗಳನ್ನು ಕೂಡ ಲಿಂಗತ್ವಕ್ಕೊಳಪಡಿಸಬಹುದು. ಉದಾಹರಣೆಗೆ, ಮನೆಯ ಯಜಮಾನನಿಗೆಂದು ದೊಡ್ಡಲೋಟ, ಕುರ್ಚಿ ಅಥವಾ ಹಾಸಿಗೆಗಳನ್ನು ಮೀಸಲಿಡಲಾಗುತ್ತದೆ. ಶ್ರಮಿಕ ವರ್ಗದ ಮನೆಗಳಲ್ಲಿ ಸೈಕಲ್ಲು, ರೇಡಿಯೊ, ವಾಚುಗಳೆಲ್ಲವೂ ಪುರುಷರದಾಗಿರುತ್ತವೆ.

**ಭಾಷೆ ಕೂಡ ಲಿಂಗತ್ವೀಕರಣಗೊಂಡಿಲ್ಲವೆ ?**

ನಿಜವಾಗಿಯೂ ಹೌದು. ಭಾಷೆಯು ಪಿತೃಪ್ರಧಾನವಾಗಿದೆ. ಅದರಿಂದಾಗಿಯೇ ಅದು ಲಿಂಗತ್ವದ ಪೂರ್ವಗ್ರಹದ ಮತ್ತು ಅಸಮಾನತೆಗಳನ್ನು ಪ್ರವಹಿಸುತ್ತದೆ ಮತ್ತು ಪ್ರತಿಬಿಂಬಿಸುತ್ತದೆ. ಹೆಚ್ಚಿನ ಸಂದರ್ಭಗಳಲ್ಲಿ ಪುರುಷರು ತಮ್ಮದೇ ಆದ ಅಂದರೆ ಮಹಿಳೆಯರು ಬಳಸದಿರುವ ಶಬ್ದಭಂಡಾರವನ್ನು ಹೊಂದಿರುತ್ತಾರೆ. ಕಣ್ಣಿಗೆ ಎದ್ದುಕಾಣುವ ಉದಾಹರಣೆಯೆಂದರೆ, ಲೈಂಗಿಕ ಅರ್ಥಗಳಿರುವ ಬೈಗುಳಗಳು. ಅವುಗಳನ್ನು ಸಾಮಾನ್ಯವಾಗಿ ಪುರುಷರು ಬಳಸುತ್ತಾರೆ. ಯಾವ ಸಂಕೋಚವೂ ಇಲ್ಲದೆ ಅವುಗಳನ್ನು ತಾವು ಬಳಸುತ್ತಾರಾದರೂ ಮಹಿಳೆಯರು ಅದನ್ನು ಬಳಕೆ ಮಾಡಿದಾಗ ಗಾಬರಿಗೊಳ್ಳುತ್ತಾರೆ.

ನಮ್ಮ ಭಾಷೆಗಳು ಗಾದೆಗಳು ಮತ್ತು ಸೂಕ್ತಿಗಳಿಂದ ತುಂಬಿಹೋಗಿವೆ. ಅವು ಮಹಿಳೆಯರು ಪುರುಷರಿಗಿಂತ ಕಡಿಮೆ/ಕೀಳು ಎಂದು ತೋರಿಸುತ್ತವೆ. ಮಹಿಳೆಯರು ಪಾಪಿಗಳು ಹಾಗೂ ಜಗಳಗಂಟಿಯರೆಂದು ಹೇಳುತ್ತವೆ. ಹಿಂದಿಯ ದ್ವಿಪದಿಯೊಂದು, ತಮಟೆ, ಅಶಿಕ್ಷಿತ ಅಥವಾ ಕೀಳುಜಾತಿಯ ವ್ಯಕ್ತಿ ಮತ್ತು ಮಹಿಳೆಯರು ಹೊಡೆಸಿಕೊಳ್ಳಲು ಯೋಗ್ಯರೆಂದು ಹೇಳುತ್ತದೆ. 'ಮಹಿಳೆಯ ಸ್ವರ್ಗ ತನ್ನ ಗಂಡನ ಪದತಲದಲ್ಲಿ' ಎನ್ನುವ ಗಾದೆಯನ್ನು ಕೆಲವು ಮೌಲ್ವಿಗಳು ಸದಾ ಹೇಳುತ್ತಿರುತ್ತಾರೆ. ಬಾಂಗ್ಲಾ ಭಾಷೆಯಲ್ಲಿ ಸೂಕ್ತಿಯೊಂದಿದೆ : **"ಯಾರ ಹಸು ಸಾಯುತ್ತದೋ ಅವನು ನತದೃಷ್ಟ; ಯಾರ ಹೆಂಡತಿ ಸಾಯುತ್ತಾಳೋ ಅವನು ಅದೃಷ್ಟವಂತ".**

*(ಮುಂದುವರಿಯುವುದು)*

ಎಲ್ಲರ ಹೆಂಡಿರು ತೊಳಸಿಕ್ಕುವರು
ಎನ್ನ ಗಂಡಂಗೆ ತೊಳಸುವುದಿಲ್ಲ,
ಎಲ್ಲರ ಗಂಡಂದಿರಿಗೆ ಬಸಿವರು
ಎನ್ನ ಗಂಡಂಗೆ ಬಸಿವುದಿಲ್ಲ,
ಎಲ್ಲರ ಗಂಡಂದಿರಿಗೆ ಬೀಜವುಂಟು
ಎನ್ನ ಗಂಡಂಗೆ ಅಂಡದ ಬೀಜವಿಲ್ಲ
ಎಲ್ಲರ ಗಂಡಂದಿರು ಮೇಲೆ
ಎನ್ನ ಗಂಡ ಕೆಳಗೆ, ನಾಮೇಲೆ
ಕದಿರ ರೆಮ್ಮೆಯೊಡೆಯ ಗುಮ್ಮೇಶ್ವರಾ

**–ಕದಿರ ರೆಮ್ಮವ್ವೆ** (ವಚನಕಾರ್ತಿ)




# ಡಾ. ಚಂದ್ರಮತಿ ಸೋಂದಾ ಅವರ 'ಚಿಪ್ಪೊಡೆದ ಮೌನ'

## ಸ್ತ್ರೀವಾದಿ ವಿಮರ್ಶೆ

● ಡಾ. ಸಿ.ಜಿ. ಉಷಾದೇವಿ

ಮಹಿಳಾ ಅಧ್ಯಯನ ಮತ್ತು ಸ್ತ್ರೀವಾದಿ ವಿಮರ್ಶೆಗೆ ಸಂಬಂಧಿಸಿದಂತೆ ಚಂದ್ರಮತಿ ಸೋಂದಾ ಅವರ 'ಚಿಪ್ಪೊಡೆದ ಮೌನ' ಕೃತಿ ಮಹಿಳಾ ಬದುಕನ್ನು ವಿವಿಧ ಆಯಾಮಗಳಿಂದ ಪರಿಚಯಿಸುತ್ತದೆ. ಅಭಿರುಚಿ ಪ್ರಕಾಶನ, ಸರಸ್ವತಿಪುರಂ, ಮೈಸೂರು-8 ಹೊರತಂದಿರುವ ಈ ಕೃತಿಗೆ ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಪ್ರಾಧ್ಯಾಪಕರಾದ ಡಾ. ಎಚ್.ಎಸ್. ಶ್ರೀಮತಿಯವರು ಮುನ್ನುಡಿ ಬರೆದಿದ್ದಾರೆ. ಮಹಿಳಾ ಅಧ್ಯಯನ ಉಳಿದ ಜ್ಞಾನಶಿಸ್ತುಗಳಿಗಿಂತ ಹೇಗೆ ಭಿನ್ನ ಎಂಬುದನ್ನು ಮನೆ, ಕುಟುಂಬ, ವಿವಾಹಗಳಂತಹ ಖಾಸಗಿ ವಲಯಗಳಿಂದ ಹಿಡಿದು ಆರ್ಥಿಕ, ರಾಜಕೀಯ ಮುಂತಾದ ಸಾರ್ವಜನಿಕ ಕ್ಷೇತ್ರಗಳವರೆಗೂ ಈ ಅಧ್ಯಯನ ಹೇಗೆ ವಿಸ್ತರಣೆಗೊಳ್ಳುತ್ತದೆ, ಪಿತೃಪ್ರಧಾನ ಸಂಸ್ಕೃತಿಯ ಸಮಾಜ ಮಹಿಳೆಯನ್ನು ಹೇಗೆ 'ಅದೃಶ್ಯ'ವಾಗಿಸಿದೆ ಎಂಬುದನ್ನು ಮತ್ತು ಸ್ತ್ರೀವಾದಿ ಚಿಂತನೆ ಹಾಗೂ ಚಳವಳಿಗಳು, ಮಹಿಳಾ ಬದುಕಿನ ಸಮಸ್ಯೆಗಳು ಎಲ್ಲವನ್ನೂ ಒಟ್ಟೊಟ್ಟಿಗೆ ನಿರ್ವಹಿಸಬೇಕಾದ ಒತ್ತಡ ಮಹಿಳಾ ಅಧ್ಯಯನಕ್ಕೆ ಎದುರಾಗುತ್ತದೆ ಎಂಬುದನ್ನು ವಿವರಿಸುತ್ತಾರೆ. ಆ ದೃಷ್ಟಿಯಿಂದ ಈ ಕೃತಿ 'ಸ್ತ್ರೀವಾದಿ ವಿಮರ್ಶೆ'ಯನ್ನು ಬೆಳೆಸಿದೆ. ಲೇಖಕಿ ಕನ್ನಡದಲ್ಲಿ ಸ್ತ್ರೀವಾದಿ ಚಿಂತನೆಯ ಸಾಹಿತ್ಯವನ್ನು ಪರಿಕರವಾಗಿಸಿಕೊಂಡು ವಿಮರ್ಶಿಸುತ್ತಾರೆ. ಈ ಕೃತಿಯಲ್ಲಿ ಸೇರ್ಪಡೆಯಾಗಿರುವ ಒಂಬತ್ತು ಲೇಖನಗಳನ್ನು ಓದಿದಾಗ ಇದುವರೆಗಿನ ಕನ್ನಡ ಮಹಿಳಾ ಸಾಹಿತ್ಯ ನಡೆದು ಬಂದ ದಾರಿ ಎತ್ತ ಸಾಗುತ್ತಿದೆ ? ಮಹಿಳಾ ಆಲೋಚನಾಕ್ರಮ ಕಾಲಕಾಲಕ್ಕೆ ಬೆಳೆದು ಬಂದ ರೀತಿ, ಸದ್ಯಕ್ಕೆ ಮಹಿಳಾ ಸಾಹಿತ್ಯ ಏನನ್ನು ಪ್ರತಿಫಲಿಸುತ್ತಿದೆ? ಎಂಬುದರ ವಿವರಗಳು ತೆರೆದುಕೊಳ್ಳುತ್ತವೆ. ಕನ್ನಡ ಮಹಿಳಾ ಸಾಹಿತ್ಯದ ವಿಸ್ತಾರವಾದ ಓದನ್ನು ಶ್ರದ್ಧೆ ಮತ್ತು ಶಿಸ್ತಿನಿಂದ ಮಾಡಿರುವ ಲೇಖಕಿ, ಪ್ರತಿಲೇಖನದ ಕೊನೆಯಲ್ಲೂ 'ತಾತ್ವಿಕ ಒಳನೋಟ'ಗಳನ್ನು ನೀಡುವ ಮುಖಾಂತರ ಸ್ತ್ರೀವಾದಿ ವಿಮರ್ಶೆಯ ದಿಕ್ಕನ್ನು ವಿಸ್ತರಿಸಿದ್ದಾರೆ ಹಾಗೂ ಮಹಿಳಾ ಬದುಕಿನ ಸಮಸ್ಯೆಯ ಮೂಲದ ಹುಡುಕಾಟದಲ್ಲಿ ನಮ್ಮ ಲೇಖಕಿಯರ ಕಥಾಜಗತ್ತು ಹೇಗೆ ಅನಾವರಣಗೊಂಡಿದೆ ಎಂಬುದನ್ನು ತಲಸ್ಪರ್ಶಿಯಾಗಿ ವಿಶ್ಲೇಷಿಸಿದ್ದಾರೆ.

ಮೊದಲೇ ತಿಳಿಸಿದಂತೆ ಈ ಕೃತಿಯಲ್ಲಿರುವ ಒಂಬತ್ತು ಲೇಖನಗಳು ಮಹಿಳಾ ಕಥಾಸಾಹಿತ್ಯವನ್ನು ಆಕರವಾಗಿಟ್ಟುಕೊಂಡು ಮಹಿಳಾ ಸಮಸ್ಯೆಗಳ ವಿಶ್ಲೇಷಣೆಯನ್ನು ಮಾಡುತ್ತವೆ.

**'ಮಹಿಳಾ ಸಾಹಿತ್ಯ ಪರಂಪರೆ'** - ಎಂಬ ಲೇಖನದಲ್ಲಿ 1947-97ರ ವರೆಗಿನ ಅರ್ಧ ಶತಮಾನದಲ್ಲಿ ಮಹಿಳೆಯಿಂದ ರಚಿತವಾದ ಕಥಾಸಾಹಿತ್ಯದಲ್ಲಿ ಪ್ರತಿಭಟನೆಯ ಸ್ವರೂಪದ ವಿಶ್ಲೇಷಣೆಯನ್ನು ಮಾಡಿದ್ದಾರೆ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಮಹಿಳಾದನಿ ಮೊದಲ ಬಾರಿಗೆ ಕೇಳಲು ಸಾಧ್ಯಮಾಡಿದ ತಿರುಮಲಾಂಬ, ಆರ್. ಕಲ್ಯಾಣಮ್ಮ ಬೆಳಗೆರೆ ಜಾನಕಮ್ಮ, ಗಿರಿಬಾಲೆ, ಶ್ಯಾಮಲಾದೇವಿ ಮೊದಲಾದವರ ಸಾಹಿತ್ಯವನ್ನು ವಿಶ್ಲೇಷಿಸಿದ್ದಾರೆ. ಸ್ವಾತಂತ್ರ್ಯಪೂರ್ವದ ಲೇಖಕಿಯರಲ್ಲಿ ವಿಶಿಷ್ಟರಾದ ಕೊಡಗಿನ ಗೌರಮ್ಮ ಮುಂತಾದ ಲೇಖಕಿಯರ ಪಟ್ಟಿಯನ್ನು ನೀಡಿ, "ಇವರೆಲ್ಲರೂ ಮಹಿಳಾ ಸಮಸ್ಯೆಯನ್ನು ಅರ್ಥೈಸಲು ಶ್ರಮಿಸಿದ್ದಾರೆ. ಸ್ವಾತಂತ್ರ್ಯ ದೊರಕಿದ ನಂತರವೂ ಬದಲಾದ ಸನ್ನಿವೇಶಗಳಲ್ಲಿ ಮಹಿಳೆಯ ಪರಿಸ್ಥಿತಿ ಸುಧಾರಣೆಯಾಗದಿದ್ದಾಗ 'ಪ್ರತಿಭಟನೆ' ಅನಿವಾರ್ಯವಾಗಿ 'ಮಹಿಳಾದನಿ' ಗಟ್ಟಿಯಾಗಿ ಕೇಳಬರತೊಡಗಿತು" ಎನ್ನುತ್ತಾರೆ.

**'ಅರಿವಿನೊಡನೆ'** - ಮಹಿಳಾ ಶಿಕ್ಷಣದ ಸಮಸ್ಯೆಯನ್ನು ಈ ಲೇಖನ ಕೇಂದ್ರವಾಗಿಟ್ಟುಕೊಂಡಿದೆ. ಸ್ವಾತಂತ್ರ್ಯಪೂರ್ವದಲ್ಲಿ 'ಸ್ತ್ರೀಶಿಕ್ಷಣ' ಒಂದು ಚರ್ಚಾವಿಷಯವಾಗಿತ್ತು. ಆ ಕಾರಣದಿಂದಲೇ ಸ್ವಾತಂತ್ರ್ಯಪೂರ್ವದ ಲೇಖಕಿಯರು ಸ್ತ್ರೀಶಿಕ್ಷಣಕ್ಕೆ ತಮ್ಮ ಬರಹಗಳಲ್ಲಿ ಒತ್ತು ನೀಡಿದ್ದಾರೆ. ತ್ರಿವೇಣಿ, ಎಚ್.ಎಸ್. ಪಾರ್ವತಿ, ಅನುಪಮಾ ನಿರಂಜನ, ಗಂಗಾ ಪಾದೇಕಲ್, ಸಾರಾ ಅಬೂಬಕರ್ ಮುಂತಾದವರ ಕಥೆ, ಕಾದಂಬರಿಗಳ ಸನ್ನಿವೇಶದಿಂದ ಹೆಕ್ಕಿದ ವಿವರಗಳಲ್ಲಿ 'ಶಿಕ್ಷಣ'ವೂ ಮಹಿಳಾ ಬದುಕಿನ ಸಮಸ್ಯೆಗೆ ಪರಿಹಾರ ನೀಡುತ್ತದೆ ಎಂಬ ನಂಬಿಕೆಯಿಂದ ರಚನೆಗೊಂಡ ಕಥೆಗಳನ್ನು ಒಟ್ಟುಗೂಡಿಸಿ, ವಿಮರ್ಶೆಗೊಳಪಡಿಸಿದ್ದಾರೆ.

**'ಮನೆಯೊಳಗಿನ ಮಾತು'** - ಲೇಖನದಲ್ಲಿ "ಕುಟುಂಬವು ಮನೆ, ಸಮಾಜದ ಒಂದು ಘಟಕ. ಕುಟುಂಬ ವ್ಯವಸ್ಥೆಯಲ್ಲಿ ಮಹಿಳೆಗೆ ಧರ್ಮ, ಸಂಸ್ಕೃತಿಯ ಹೆಸರಿನಲ್ಲಿ ನಂಬಿಸಲಾದ ಮೌಲ್ಯಗಳು ಅವಳ ಅಸ್ತಿತ್ವವನ್ನೇ ನಗಣ್ಯಗೊಳಿಸಿದ್ದು ಅವಳ ಅರಿವಿಗೇ ಬಂದಿರಲಿಲ್ಲ. 'ಬಾಯ್ಮುಚ್ಚಿ'ಕೊಂಡು, ಹೊಂದಾಣಿಕೆಯಿಂದ ಬದುಕುವುದು ಒಪ್ಪಿತ ಮೌಲ್ಯವಾಗಿದ್ದು ಬದಲಾದ ಸಾಮಾಜಿಕ ಪರಿಸರ, ದೊರಕಿದ ಶಿಕ್ಷಣ, ಪಡೆದ ಉದ್ಯೋಗ ತನ್ನನ್ನು ತಾನೇ ಹುಡುಕಿಕೊಂಡು ಅರ್ಥಮಾಡಿಕೊಳ್ಳುವ ಆಲೋಚನಾಕ್ರಮ ಮಹಿಳೆಯರಿಗೆ ತಿಳಿಯತೊಡಗಿದೆ" ಎಂದು ಚಂದ್ರಮತಿಯವರು ಸರಿಯಾಗಿಯೇ ಗುರುತಿಸುತ್ತಾರೆ. ಇಲ್ಲಿಯೂ ಶಾಂತಾದೇವಿ ಕಣವಿ, ಎಚ್.ಎಸ್. ಕಾತ್ಯಾಯಿನಿ, ಅನುಪಮಾ ನಿರಂಜನ, ವೈದೇಹಿ, ಸಾರಾ ಅಬೂಬಕರ್, ನೇಮಿಚಂದ್ರ, ಪ್ರೇಮಾಭಟ್, ಎಂ.ಎಸ್. ವೇದಾ ಮುಂತಾದವರ ಕಥೆಗಳಲ್ಲಿಯ ಆಶಯ, ಅಭಿಪ್ರಾಯಗಳನ್ನು ಒಟ್ಟುಗೂಡಿಸಿ ತಾತ್ವಿಕ ಚೌಕಟ್ಟನ್ನು ನೀಡಿದ್ದಾರೆ.

**'ವಿವಾಹ ಸಂಬಂಧಿ ಪ್ರಶ್ನೆಗಳು'** - ವಿವಾಹ ಸಂಸ್ಥೆಯ ಹುಟ್ಟು, ಬೆಳವಣಿಗೆಯನ್ನು ಗುರುತಿಸುತ್ತಾ ಹೆಣ್ಣಿಗೂ ಮದುವೆಗೂ ನಡುವಿನ ಸಂಬಂಧದ ಜಟಿಲತೆ ಹಾಗೂ ಸಂಕೀರ್ಣತೆಯನ್ನು ಬಾಲ್ಯವಿವಾಹ, ವರದಕ್ಷಿಣೆ, ವಿಧವಾ ವಿವಾಹ, ವಿವಾಹೇತರ ಸಂಬಂಧ, ಅಸಮವಿವಾಹ, ಬಸವಿಯರ, ವೇಶ್ಯೆಯರ ವಿವಾಹಕ್ಕಿರುವ ಅಡಚಣೆಗಳು ಎಂದು ವಿಭಾಗಿಸಿಕೊಂಡು ಈ ಎಲ್ಲ ವಿಷಯಗಳನ್ನು ಲೇಖಕಿಯರ ಕಥಾಜಗತ್ತು ಹೇಗೆ ಶೋಧಿಸಿದೆ ಎಂಬುದರ ವಿವರಗಳು ಇಲ್ಲಿವೆ.




**'ಗೋಡೆ ಅಡ್ಡ'** - ಲೇಖನದಲ್ಲಿ ಗಂಡು-ಹೆಣ್ಣು ಪರಸ್ಪರ ಸಂಗಾತಿಗಳಾಗಲು ಧರ್ಮ, ಜಾತಿಗಳು ಹೇಗೆ ಅಡ್ಡಗೋಡೆಗಳಾಗಿ ನಿಂತುಬಿಡುತ್ತವೆ ಮತ್ತು ಈ ಸಮಸ್ಯೆಯ ಸಂಕೀರ್ಣತೆಯನ್ನು ಹಲವಾರು ಲೇಖಕಿಯರ ಕಥೆಗಳ ಮೂಲಕ ಚರ್ಚಿಸಲಾಗಿದೆ.

**'ಉದ್ಯೋಗಂ....?'** - ಲೇಖನವು ಮಹಿಳೆಯ ಆರ್ಥಿಕ ಸ್ಥಿತಿ-ಗತಿಗೆ ಸಂಬಂಧಿಸಿದ್ದು. ಉದ್ಯೋಗಪರತೆಯಿಂದ ಕುಟುಂಬದಲ್ಲಿ ಅವಳು ಎದುರಿಸಬೇಕಾದ ಸಮಸ್ಯೆಗಳೇನು ಎಂಬುದು 'ಕಥಾಸಾಹಿತ್ಯ'ದ ಮೂಲಕ ಪ್ರತಿಬಿಂಬಿತವಾಗಿದೆ.

**'ಮೌಲ್ಯಗಳ ಸ್ಥಿತ್ಯಂತರ'** - ಲೇಖನದಲ್ಲಿ ಧರ್ಮದ ಹೆಸರಿನಲ್ಲಿ ಮಹಿಳೆ ನಲುಗುತ್ತಿರುವುದು.... ಧರ್ಮ, ನಂಬಿಕೆ, ಸಂಪ್ರದಾಯ, ಮೌಲ್ಯಗಳು ಜೀವವಿರೋಧಿ ಅಂಶಗಳನ್ನು ಪ್ರತಿಪಾದಿಸಲು ಹೊರಟಾಗ ಸಮಾಜದ ಒಟ್ಟು ಅಭಿವೃದ್ಧಿಯ ಮೇಲೆ ಯಾವ ಪರಿಣಾಮ ಬೀರುತ್ತದೆ ಎಂಬುದನ್ನು ಮಹಿಳಾ ಜಗತ್ತಿನ ಹಿನ್ನೆಲೆಯಲ್ಲಿ ತೀವ್ರ ಶೋಧಕ್ಕೆ ಒಳಪಡಿಸಿದ್ದಾರೆ.

**'ಬಂಜೆಂಬ ಶಬುದ ಬಿಡಿಸಯ್ಯಾ'** - ಲೇಖನದಲ್ಲಿ ಮಹಿಳೆಯ ತಾಯ್ತನಕ್ಕೆ ಸಿಕ್ಕಿರುವ ಪ್ರಾಮುಖ್ಯ, ಮಗುವಿಲ್ಲದಿದ್ದರೆ ಬಾಳು ವ್ಯರ್ಥ ಎಂಬ ನಂಬಿಕೆ, ಇಲ್ಲಿಯ ಪುರುಷ ರಾಜಕಾರಣವನ್ನು ಹೊರಗೆಳೆದಿದ್ದಾರೆ. ತಾಯ್ತನ ಅವಳ ಆಯ್ಕೆಯಾಗದೆ ತಾಯಿಯಾಗಲೇಬೇಕಾದ ಅನಿವಾರ್ಯತೆ, ಅದೂ ವೈವಾಹಿಕ ಪರಿಧಿಯೊಳಗೆ ಮಾತ್ರ ಮುಂತಾದ ವಿಷಯಗಳನ್ನು ಮಹಿಳೆ ಅನುಭವಿಸುತ್ತಾ ಬಂದಿರುವ ತಾಯ್ತನ,ಬಂಜೆತನಗಳ ಸುಖ-ದುಃಖಗಳನ್ನು ಮಹಿಳಾ ಕಥಾಜಗತ್ತಿನ ಅಡಿಯಲ್ಲಿ ವಿಶ್ಲೇಷಿಸುತ್ತಾ "ಸಮಾಜ ನಿರ್ಮಿತ ಸಿದ್ಧಮಾದರಿಗಳನ್ನು ಮೀರುವ, 'ಹೊಸಮಾದರಿ' ಗಳನ್ನು ರೂಪಿಸುವ ದಿಕ್ಕಿನಲ್ಲಿ ಲೇಖಕಿಯರ ಬರವಣಿಗೆಗಳು ಕ್ರಿಯಾಶೀಲ ವಾಗಿವೆ. ಅವಳ 'ಇರುವಿಕೆ'ಯನ್ನು ಗುರುತಿಸುವ ಅವಳ 'ಅನನ್ಯತೆ'ಯನ್ನು ಪ್ರತಿಪಾದಿಸುವ ಮೂಲಕ ಸಮಾನತೆಯ ಸಮಾಜ ನಿರ್ಮಾಣದ ಕಡೆಗೆ ಹೆಜ್ಜೆ ಇಡುವಂತಹ ಕೃತಿಗಳ ರಚನೆಯನ್ನು ಲೇಖಕಿಯರು ಮಾಡಿದ್ದಾರೆ" ಎಂಬುದು ಈ ಲೇಖನದ ಸಾರವಾಗಿದೆ.

**'ಚಳವಳಿಗಳು ಮತ್ತು ಮಹಿಳಾ ಸಾಹಿತ್ಯ'** - ಲೇಖನದಲ್ಲಿ 1970ರ ದಶಕವು ಕರ್ನಾಟಕ ಇತಿಹಾಸದಲ್ಲಿ ಮಹತ್ವಪೂರ್ಣವಾದದ್ದು. ಏಕೆಂದರೆ ಜನಪರ ಚಳವಳಿಗಳಾದ ದಲಿತ, ಬಂಡಾಯ, ಪರಿಸರ ಚಳವಳಿ, ರೈತ ಚಳವಳಿ ಹಾಗೆಯೇ ಮಹಿಳಾ ಚಳವಳಿಗಳು ರೂಪು ಪಡೆದವು. ಮಹಿಳಾ ಚಳವಳಿಯ ಪರಿಣಾಮವಾಗಿ 'ಸ್ತ್ರೀವಾದ' ಹುಟ್ಟುಪಡೆದರೂ, ಸಮಾನತೆಯ ಪರಿಕಲ್ಪನೆ, ಸಮಾಜದ ಎಲ್ಲ ಕ್ಷೇತ್ರಗಳಲ್ಲಿ (ಸಾಂಸ್ಕೃತಿಕ, ಸಾಹಿತ್ಯಿಕ, ಧಾರ್ಮಿಕ, ರಾಜಕೀಯ, ಸಾಮಾಜಿಕ...) 'ಪ್ರತಿಭೆ, ಸಾಧನೆಯು ಲಿಂಗಸಂಬಂಧಿ ಅಲ್ಲ' ಎನ್ನುವ ನಿಲುವು ತಳೆದದ್ದನ್ನು ಗುರುತಿಸುತ್ತಾರೆ.

**'ಸುತ್ತು ನೋಟ'** - ಲೇಖನದಲ್ಲಿ ಮಹಿಳಾ ಸಾಹಿತ್ಯವು ನಡೆದು ಬಂದ ದಾರಿಯನ್ನು ಸಮೀಕ್ಷೆಗೊಳಪಡಿಸಿದ್ದಾರೆ.

"ಇಂದು ಮಹಿಳಾಪರ ದೃಷ್ಟಿ ನಿಧಾನವಾಗಿ ಸಂಸ್ಕೃತಿಯ ಒಳಪದರಗಳನ್ನು ಪ್ರವೇಶಿಸುವತ್ತ ಹೆಜ್ಜೆ ಇಡುತ್ತಿದೆ.... ಬದುಕನ್ನು ಹಾಗೂ ಅದನ್ನು ಬಿಂಬಿಸುವ ಸಾಹಿತ್ಯವನ್ನು ಸ್ತ್ರೀಪರ ನಿಲುವಿನಿಂದ ನೋಡುವ ಅಗತ್ಯವಿದೆ" - ಎಂದು ಮುನ್ನುಡಿಯಲ್ಲಿ ಮಂಡಿತವಾದ ಡಾ॥ ಎಚ್.ಎಸ್. ಶ್ರೀಮತಿಯವರ ಅಭಿಪ್ರಾಯಕ್ಕೆ ಈ ಕೃತಿಯನ್ನು ರಚಿಸಿಸಿರುವ ಡಾ॥ ಚಂದ್ರಮತಿ ಸೋಂದಾರವರ ಪ್ರಯತ್ನ ಪೂರಕವಾಗಿದೆ. ❑

*ಕುಟುಂಬದ ಹೊರಗೆ ಮಹಿಳೆಯ ಮೇಲೆ ನಡೆಯುವ ಹಿಂಸೆಯ ಹಾಗೆ ಮನೆಯ ಒಳಗೆ ಮಹಿಳೆಯ ಮೇಲೆ ನಡೆಯುತ್ತಿರುವ ಹಿಂಸೆಯನ್ನು ಗಂಭೀರವಾಗಿ ಪರಿಗಣಿಸಬೇಕಾಗುತ್ತದೆ. ಇತ್ತೀಚೆಗೆ ಉತ್ತರ ಪ್ರದೇಶದಲ್ಲಿ ಜಾನ್-ಹಾಪ್‌ಕಿನ್ ಸಂಸ್ಥೆ ಈ ಸಮಸ್ಯೆಯನ್ನು ಕುರಿತು ಒಂದು ಅಧ್ಯಯನ ನಡೆಸಿದೆ. ಈ ಅಧ್ಯಯನದಲ್ಲಿ 2199 ಜನ ಮಹಿಳೆಯರನ್ನು ಸಂದರ್ಶಿಸಲಾಗಿದ್ದು ಶೇ. 18ರಷ್ಟು ಮಹಿಳೆಯರು ಗರ್ಭಿಣಿಯರಾಗಿದ್ದಾಗ ಕೌಟುಂಬಿಕ ಹಿಂಸೆಗೆ ಒಳಗಾಗಿದ್ದಾರೆ. ಇಂತಹ ಹಿಂಸೆಗೆ ಒಳಗಾದ ಮಹಿಳೆಯರ ಮಕ್ಕಳ ಮರಣದ ಸಂಖ್ಯೆಯು ಹೆಚ್ಚಾಗಿದೆ. ಗರ್ಭಿಣಿ ಹೆಂಗಸರ ಮೇಲೆ ನಡೆಯುವ ಕೌಟುಂಬಿಕ ಹಿಂಸೆಯನ್ನು ತಡೆದರೆ 5 ಮಕ್ಕಳಲ್ಲಿ ಒಂದು ಮಗುವನ್ನು ಬದುಕಿಸಬಹುದು. ಕರ್ನಾಟಕ ಸರ್ಕಾರ ಮಹಿಳೆಯರಿಗೆ ರಕ್ಷಣೆ ನೀಡುವ ಉದ್ದೇಶದಿಂದ ಮಹಿಳೆಯರು ರಾತ್ರಿ ಪಾಳಿಯಲ್ಲಿ ಕೆಲಸ ಮಾಡುವುದನ್ನು ರದ್ದುಪಡಿಸುವ ಬದಲು, ಕೆಲಸದ ಸ್ಥಳದಲ್ಲಿ ಹಾಗೂ ಮುಖ್ಯವಾಗಿ ಕುಟುಂಬದ ಒಳಗೆ ರಕ್ಷಣೆ ನೀಡುವ ಬಗ್ಗೆ ಯೋಚಿಸಬೇಕಾಗಿದೆ.*

– **ಕಲ್ಪನಾ ಶರ್ಮ** (ಹಿಂದು ಪತ್ರಿಕೆಯಲ್ಲಿ)

# ಅಪರೂಪದ ವ್ಯಕ್ತಿ ಗೌಹರ್

-ಹೆಚ್.ಎಸ್.ಆರ್.

ಫರ್‌ಯಾಲ್ ಆಲೀ ಗೌಹರ್ ಪ್ರತಿಭಟನೆಗೆ ಇನ್ನೊಂದು ಹೆಸರು. ಬಹುಮುಖ ಪ್ರತಿಭೆಯ ಗೌಹರ್ ಲೇಖಕಿ, ಚಲನಚಿತ್ರ ನಿರ್ದೇಶಕಿ, ನಟಿ, ಕಾದಂಬರಿಕಾರ್ತಿ ಹಾಗೂ ರಾಜಕೀಯ ಪ್ರಜ್ಞೆಯನ್ನು ಮೈಗೂಡಿಸಿಕೊಂಡ ಅಪರೂಪದ ವ್ಯಕ್ತಿ.

ಪಾಕಿಸ್ತಾನದ ಲಾಹೋರ್‌ನಲ್ಲಿ ಜನಿಸಿದ ಗೌಹರ್ ತನ್ನ ಕಾಲೇಜು ದಿನಗಳಲ್ಲೆ ಅನ್ಯಾಯದ ವಿರುದ್ಧ ಸಿಡಿದೇಳುತ್ತಿದ್ದರು. ಸೂಕ್ಷ್ಮಮತಿಯ ಗೌಹರ್ ಸದಾ ತನ್ನ ಸುತ್ತ-ಮುತ್ತ ಪರಿಸರದಲ್ಲಿ ಕಂಡುಬರುವ ಅಸಮಾನತೆ, ಅನ್ಯಾಯಗಳಿಂದ ತಲ್ಲಣಗೊಳ್ಳುತ್ತಿದ್ದರು.

ಮೂರನೇ ಜಗತ್ತಿನ ತನ್ನ ದೇಶಕ್ಕೂ, ಬಲಾಢ್ಯವಾದ ಪಾಶ್ಚಾತ್ಯ ದೇಶಗಳಿಗೂ ನಡುವಿರುವ ಅಂತರ ಆಕೆಗೆ ನಿರಂತರ ಪ್ರಶ್ನೆಯಾಗಿದೆ. ಅಮೆರಿಕದ ವಸಾಹತುಶಾಹಿ ನೀತಿಯನ್ನು ಗೌಹರ್ ಕಠೋರವಾಗಿ ಟೀಕಿಸುತ್ತಾರೆ.

2002ರ ಆಗಸ್ಟ್‌ನಲ್ಲಿ ಈಕೆಯ ಪ್ರಖ್ಯಾತ ಕಾದಂಬರಿ "ದ ಸೆಂಟ್ ಆಫ್ ವೆಟ್ ಅರ್ಥ್" ಅನ್ನು ಪೆಂಗ್ವಿನ್ ಇಂಡಿಯಾದವರು ಪ್ರಕಟಿಸಿದ್ದಾರೆ. ಈಕೆ ತನ್ನ ವೃತ್ತಿಗೆ ಸಂಬಂಧಪಟ್ಟ ಎಲ್ಲಾ ಕೆಲಸಗಳನ್ನು ತಾನೇ ಮಾಡಿಕೊಳ್ಳುತ್ತಾರೆ. ನಿರ್ದೇಶನ, ಎಡಿಟ್ ಮಾಡುವುದು, ವಸ್ತ್ರವಿನ್ಯಾಸ, ಕೊನೆಗೆ ಚಿತ್ರ ತಂಡದವರಿಗೆ ಅಡಿಗೆ ಮಾಡುವುದರಿಂದ ಎಲ್ಲಾ ಕೆಲಸಗಳನ್ನು ತಾನೇ ವಹಿಸಿಕೊಳ್ಳುತ್ತಾಳೆ. ಗೌಹರ್ ವ್ಯಕ್ತಿತ್ವವನ್ನು 'ಅತಿರೇಕದ' ವ್ಯಕ್ತಿತ್ವವೆಂದು ಹೇಳಲಾಗುತ್ತಿದ್ದರೂ ತನ್ನ "ಸಾಂಪ್ರದಾಯಿಕವಲ್ಲದ ಜೀವನಶೈಲಿಗೆ ಪಾಕಿಸ್ತಾನದಲ್ಲಿ ಸಾವೇ ಎದುರಾದರೂ ಎದುರಿಸುತ್ತೇನೆ" ಎಂಬ ಛಲ ಆಕೆಯ ಅಂತರಂಗದಲ್ಲಿ ಅಡಗಿದೆ.

ಎರಡು ಮದುವೆಯಾಗಿ ವಿಚ್ಛೇದನ ಪಡೆದಿರುವ ಗೌಹರ್ 2002ರಲ್ಲಿ ಅಮೆರಿಕದಿಂದ ಸೌತ್ ಏಷಿಯಾಗೆ ರಾಯಭಾರಿಯಾಗಿ ಪಾಕಿಸ್ತಾನಕ್ಕೆ ವಾಪಸ್ಸಾದರು. 'ರಾಜಕೀಯ ಪಾಲಿಸಿಗಳಿಗೂ ಆರ್ಥಿಕ ರಚನೆಗೂ ನಿಕಟವಾದ ಸಂಬಂಧವಿರುವುದರಿಂದ ಜನರ ಜೀವನದ ಸ್ಥಿತಿಗತಿಯನ್ನು ನಿರ್ಧರಿಸುವಲ್ಲಿ ಅದು ಮಹತ್ವದ ಪಾತ್ರವನ್ನು ವಹಿಸಿತ್ತು' ಎನ್ನುತ್ತಾರೆ ಗೌಹರ್. ಈ ಪ್ರಕ್ರಿಯೆಯಲ್ಲಿ ಯಾವುದೇ ನಿರ್ಣಾಯಕ ಪಾತ್ರ ಹೊಂದಿರದ ಅಂಚಿಗೆ ತಳ್ಳಲಾದ ಅಮಾಯಕ ಜನರ ಬಗ್ಗೆ ಗೌಹರ್ ಅಪಾರವಾದ ಕಾಳಜಿಯನ್ನು ಹೊಂದಿದ್ದಾರೆ. ಭೂ ಸುಧಾರಣೆ ಕುರಿತು ಈಕೆ ಮಾಡಿದ ಸಾಕ್ಷ್ಯಚಿತ್ರವನ್ನು ಪಾಕಿಸ್ತಾನದ ಅಧ್ಯಕ್ಷರಿಗೆ ಹಾಗೂ ಶಾಸಕರಿಗೆ ತೋರಿಸಲಾಯಿತು. ಫ್ಯೂಡಲ್ ಮನೋಭಾವನೆಯನ್ನು ಹೊಂದಿರುವ ಇವರಿಂದ ಬದಲಾವಣೆಯನ್ನು ನಿರೀಕ್ಷಿಸಲು ಸಾಧ್ಯವೇ ಎನ್ನುತ್ತಾರೆ ಗೌಹರ್. ವಿದೇಶಿ ಹಣ ಪಡೆಯುವ ಸ್ವಯಂಸೇವಾ ಸಂಸ್ಥೆಗಳ ಕಾರ್ಯಗಳಿಂದಾಗಿ ಪ್ರಗತಿಪರ ಚಳವಳಿಯು ಕುಂಠಿತಗೊಂಡಿದೆಯೆಂದು ಆಕೆ ಭಾವಿಸುತ್ತಾರೆ. ಗೌಹರ್ ತನ್ನ ಅಭಿಪ್ರಾಯ ಆಲೋಚನೆ ಚಿಂತನೆಗಳನ್ನು ಅಂಕಣಕಾರ್ತಿಯಾಗಿ, ನಿರ್ದೇಶಕಿಯಾಗಿ, ನಟಿಯಾಗಿ, ಲೇಖಕಿಯಾಗಿ ಅಭಿವ್ಯಕ್ತಿಸುತ್ತಾರೆ. ನಾನು ಬರೆಯುವುದು ನನ್ನ ಸ್ವಾಸ್ಥ್ಯವನ್ನು ಕಾಪಾಡಿಕೊಳ್ಳುವುದಕ್ಕೆ ಎನ್ನುತ್ತಾರೆ ಗೌಹರ್. ❑

## ಅಂತರಾಳ

ಅಂತರಾಳದಲ್ಲಿ ಹುದುಗಿರುವ
ಒಣಮರದ ಬೇರು ಸೀಳಿ
ಹೊರಬಂದಿದೆ
ರೆಂಬೆ-ಕೊಂಬೆಯಲ್ಲಿ

ನೀ ಕೊಡದೆ ಇಟ್ಟಿದ್ದ
ಸೀರೆ ಕುಪ್ಪಸಗಳು
ನೇತು ಬಿದ್ದಿವೆ
ನನ್ನ ನಗ್ನತೆಗೆ ನಾನೇ
ಒಪ್ಪಿ ಬಯಲಿಗೆಲ್ಲಾ
ಬಣ್ಣ ತುಂಬುತ್ತೇನೆ
ನಿನ್ನದೆ ದಿನವೆಲ್ಲಾ
ರೇಷ್ಮೆಯ ನುಣುಪು)
ಒಡಕು ಬಾಗಿಲಿಗೆ
ಜಣ-ಜಣ ಹರಕು
ನಾಲಿಗೆಯ ಚಿಲಕ
ಕೈ-ಕಾಲಿಗೆ ತ್ರಾಣವಿಲ್ಲದೆ
ಬಚ್ಚಿಟ್ಟ ದೇವರಿಗೆ
ನಾನು ಎಂದೋ ಚಟ್ಟ
ಕಟ್ಟಿದ್ದೇನೆ
ನನ್ನ ನಡೆಗೆ, ನುಡಿಗೆ
ದಕ್ಕದ್ದವೆಲ್ಲಾ ಚುಕ್ಕಿ
ಮಾಲೆಯಾಗಿ ಸಿಕ್ಕಿ
ಕಡಲೊಳಗೆ ನಗುತಕಲಿ
ಕವನವಾಗಿ

-ತಾಜುಮಾ



......ವಿವಾಹಿತ ಸ್ತ್ರೀ ಎದುರಿಸುತ್ತಿರುವ ಸಂದಿಗ್ಧತೆಗಳು, ಕುಟುಂಬದಲ್ಲಿಯ ಕ್ಷುಲ್ಲಕ ಕುಸಿತಕ್ಕೂ ಅವಳೇ ಹೊಣೆಗಾರಳೆಂಬ ಸಾರಾಸಗಟು ಆರೋಪಗಳು, ಇವೆಲ್ಲದರ ಮಧ್ಯೆಯೂ ಆಕೆಯ ಕರ್ತವ್ಯ ನಿರ್ವಹಣೆ, ವಿಶ್ವಾಸ ಪ್ರೀತಿ ಅಂತಃಕರಣಗಳೆಂಬ ಭಾವನಾತ್ಮಕ ಬಂಧನ, ಸಂಬಂಧವನ್ನು ಉಳಿಸಿಕೊಳ್ಳಲು ಆಕೆ ಪಡುತ್ತಿರುವ ಪಾಡು ಎಲ್ಲವೂ ನಮ್ಮ ಸಂಸ್ಕೃತಿ ಚಿಂತನೆಯ ಸ್ತ್ರೀ ಮಾದರಿಗಳಾಗಿವೆ.

-ಮಧುವೆಂಕಾರೆಡ್ಡಿ, (ಮಹಿಳಾ ಅಧ್ಯಯನ, ಕ.ವಿ.ವಿ., ಹಂಪಿ)

*Edited and Published by Rajeshwari H.S. on behalf of 'Namma Manasa' and*
*Printed at ILA Mudrana, No. 36, 40 Ft. Road, Raghavanagara, New Timberyard Layout, Bangalore - 560 026.*
*Published at No. 114/5, 9th Cross, 2nd Main, Chamarajpet, Bangalore - 560 018. Editor : Rajeshwari H.S.*




# ಕೆ.ಪಿ.ಸಿ.ಎಲ್. : ಕರ್ನಾಟಕವನ್ನು ಶಕ್ತಿಯುತಗೊಳಿಸುತ್ತಿದೆ

ವಿದ್ಯುತ್ ಕ್ಷೇತ್ರದ ಬಹಳಷ್ಟು ಉದ್ದಿಮೆಗಳು ಸುಧಾರಣೆಗಳ ಒತ್ತಡಗಳಿಗೆ ಪ್ರತಿಕ್ರಿಯಿಸುತ್ತಿರುವ ಕಾಲದಲ್ಲಿ, ಕೆ.ಪಿ.ಸಿ.ಎಲ್. ನಿಜಕ್ಕೂ ಮುಂಚೂಣಿಯಾಗಿ ಸ್ಪಂದಿಸಿದೆ. ಕಠಿಣ ಸುಧಾರಣೆಗಳಿಂದಾಗಿ ಈ ಕ್ಷೇತ್ರದ ಮೇಲಿರುವ ಒತ್ತಡಗಳ ನಡುವೆಯೂ ಸಹ, ಕೆ.ಪಿ.ಸಿ.ಎಲ್. ಪರಿಸ್ಥಿತಿಗೆ ಹೊಂದಿಕೊಳ್ಳುವ ನೂತನ ಉಪಕ್ರಮಗಳ ಮೂಲಕ ತನ್ನ ಕಾರ್ಯಾಚರಣೆಯನ್ನು ಬದಲಿಸಿಕೊಂಡು, ಮುನ್ನುಗ್ಗಿ ಇಂದು ಇತರ ಉಪಯುಕ್ತತೆಗಳಿಗೆ ಮಾದರಿಯಾಗಿ ನಿಂತಿದೆ. ಕೆಪಿಸಿಎಲ್‌ನ ನವೀನ ತಂತ್ರಜ್ಞಾನ ಮತ್ತು ಹೊಸ ಯೋಜನೆಗಳಿಗೆ ಹಣಹೂಡಿಕೆ, ಪರಿಣಾಮಕಾರಿ ಹಣಕಾಸು, ಗುತ್ತಿಗೆ, ಕಲ್ಲಿದ್ದಲು, ಬೂದಿ ಹಾಗೂ ಪರಿಸರ ಸಂರಕ್ಷಣೆ, ವ್ಯವಸ್ಥಾಪನೆ, ಇವೆಲ್ಲಕ್ಕೂ ಮಿಗಿಲಾಗಿ ಯೋಜನಾಭಿವೃದ್ಧಿ, ಚಾಲನೆ, ಪಾಲನೆ ಮತ್ತು ಇತರ ಉಪಯುಕ್ತತೆಗಳಿಗೆ ಸಲಹಾ ಸೇವೆ ಇವೆಲ್ಲವು ರಾಷ್ಟ್ರದ ವಿದ್ಯುತ್ ಕ್ಷೇತ್ರದ ವರ್ಚಸ್ಸಿಗೆ ಕೊಡುಗೆಗಳಾಗಿವೆ.

1970ರಲ್ಲಿ 746 ಮೆಗಾವಾಟ್ (ಮೆ.ವಾ.) ಸಾಮರ್ಥ್ಯದೊಂದಿಗೆ ರಚಿತಗೊಂಡು ಕೆ.ಪಿ.ಸಿ.ಎಲ್. ಇಂದು ಒಟ್ಟಾರೆ 4995 ಮೆ.ವಾ. ಹೊಂದಿದ್ದು, ಪ್ರಸ್ತುತ ನಿರ್ಮಾಣ ಹಂತದಲ್ಲಿರುವ ಬಳ್ಳಾರಿ ಶಾಖೋತ್ಪನ್ನ ವಿದ್ಯುತ್ ಸ್ಥಾವರದ ಮೊದಲ ಹಂತ ಮತ್ತು ನಾಗಝರಿ ಘಟಕಗಳ ನವೀಕರಣ ಸೇರಿದಂತೆ ನೂತನ ಯೋಜನೆಗಳಾದ ಬಳ್ಳಾರಿ ಶಾಖೋತ್ಪನ್ನ ವಿದ್ಯುತ್ ಸ್ಥಾವರದ ಎರಡನೇ ಹಂತ, ಬಿಡದಿ, ವಾರಾಹಿ ಜಲವಿದ್ಯುತ್ ಯೋಜನೆ ಹಂತ-2 ಮತ್ತು ರಾಯಚೂರು ಶಾಖೋತ್ಪನ್ನ ವಿದ್ಯುತ್ ಸ್ಥಾವರ (ಘಟಕ-8) ಯೋಜನೆಗಳಿಂದ ಮುಂದಿನ 5 ವರ್ಷಗಳಲ್ಲಿ ಸುಮಾರು 3000 ಮೆ.ವಾ.ಗಳಿಗೂ ಹೆಚ್ಚಿನ ವಿದ್ಯುತ್ ಸಾಮರ್ಥ್ಯವನ್ನು ವಿದ್ಯುತ್ ಜಾಲಕ್ಕೆ ಸೇರಿಸಿ ಕರ್ನಾಟಕವನ್ನು ಶಕ್ತಿಯುತಗೊಳಿಸುತ್ತಿದೆ.

**ಕರ್ನಾಟಕ ವಿದ್ಯುತ್ ನಿಗಮ ನಿಯಮಿತ**
82, ಶಕ್ತಿಭವನ, ರೇಸ್‌ಕೋರ್ಸ್ ರಸ್ತೆ
ಬೆಂಗಳೂರು - 560 001

ದೂರವಾಣಿ : 2225 6568, ಫ್ಯಾಕ್ಸ್ : 2225 2144
ಇಮೇಲ್ : cccm@karnatakapower.com
ವೆಬ್‌ಸೈಟ್ : www.karnatakapower.com

REGD. No. : MAG(3) NPP/399(A) / 2006-07
KA/BGS/2074/2007-09

## ಸಹೃದಯ ಓದುಗರಲ್ಲಿ

**ಯಾ**ವುದೇ ಚಳವಳಿ ಸ್ವಾಯತ್ತತೆಯನ್ನು ಉಳಿಸಿಕೊಂಡಾಗ ಮಾತ್ರ ಶಕ್ತಿಯುತವಾಗಲು ಸಾಧ್ಯ. ಮಾನಸ ಸ್ವಾಯತ್ತ ಪರಿಕಲ್ಪನೆಯನ್ನು ತಾನಿಡುವ ಪುಟ್ಟ ಹೆಜ್ಜೆಯಲ್ಲೂ ಜಾರಿಗೆ ತರಲು ಪ್ರಯತ್ನಿಸಿದೆ. ಇದುವರೆಗೂ ಮಾನಸದ ಸಭೆಗೆ ರವೀಂದ್ರ ಕಲಾಕ್ಷೇತ್ರದ ಸಂಸ ಬಯಲು ರಂಗಮಂದಿರದ ಮೆಟ್ಟಿಲುಗಳು ಆಸರೆಯಾಗಿದ್ದವು. ಮಾನಸಕ್ಕೆ ತನ್ನದೇ ಆದ ಒಂದು ಕಛೇರಿ ಮಾಡಬೇಕೆಂಬ ಕನಸು ಈಗ ನನಸಾಗಿದೆ. ಈ ಕೆಳಗಿನ ವಿಳಾಸದಲ್ಲಿ ಮಾನಸಕ್ಕೆ ಒಂದು ಪುಟ್ಟ ಮನೆಯನ್ನು ಬಾಡಿಗೆಗೆ ತೆಗೆದುಕೊಂಡಿದ್ದೇವೆ. ಬಾಡಿಗೆ 1600/-. ಇದು ನಮಗೆ ಹೊರೆಯಾದರೂ, ಮಾನಸ ಸದಸ್ಯರಿಂದ ಸಂಗ್ರಹಿಸುತ್ತಿದ್ದೇವೆ. ಸಹೃದಯರು ಬಾಡಿಗೆ ಹಣವನ್ನು ಕೊಡುಗೆಯಾಗಿ ನೀಡುವುದರ ಮೂಲಕ ನಮ್ಮ ಈ ಪ್ರಯತ್ನಕ್ಕೆ ನೆರವು ನೀಡಬೇಕೆಂದು ಕೋರುತ್ತೇವೆ. ಕೊಡುಗೆ ನೀಡಿದವರ ಹೆಸರುಗಳನ್ನು ಮಾನಸದಲ್ಲಿ ಪ್ರಕಟಿಸಲಾಗುವುದು.

*ನೀವು ಮಾನಸಕ್ಕೆ ಹೀಗೆ ಸಹಕರಿಸಬಹುದು :*

- ಪತ್ರಿಕೆಗೆ ಚಂದಾದಾರರಾಗುವುದರ ಮೂಲಕ
- ಮಾನಸ ವೇದಿಕೆಗೆ ಸದಸ್ಯರಾಗುವುದರ ಮೂಲಕ
- ಕವನ, ಲೇಖನ, ವರದಿ, ಮುಂತಾದವುಗಳನ್ನು ಕಳಿಸಿಕೊಡುವುದರ ಮೂಲಕ
- **ಪತ್ರಿಕೆಯನ್ನು ಪ್ರಾಯೋಜಿಸುವುದರ ಮೂಲಕ**

*ಸಂಪಾದಕ ಮಂಡಳಿ*

***Posted on 9th of every month***
***at Chamarajpet Post Office***

Registered
Magazine

*ವಿಳಾಸ :*
**ನಮ್ಮ ಮಾನಸ**
34/1, 2ನೇ ಕ್ರಾಸ್, ಆಜಾದ್ ನಗರ,
ಚಾಮರಾಜಪೇಟೆ, ಬೆಂಗಳೂರು - 560 018